


# ಅನ್ವೇಷಣೆ




ಸಾಹಿತ್ಯ ಸಂಸ್ಕೃತಿ ಕಲೆ



- ಜೀವನ ಪ್ರೀತಿಯ ಕೊಡಗಿನ ಗೌರಮ್ಮನವರ ಕತೆಗಳು - ಎಚ್.ಎಲ್. ಪುಷ್ಪ
- ಅಲ್ಲಮಪ್ರಭು ವಚನಗಳಲ್ಲಿ ಕಾವ್ಯ ಹಾಗೂ ಅನುಭಾವದ ಅದ್ವೈತ - ಪ್ರೊ. ಎಸ್.ಜಿ. ಸಿದ್ಧರಾಮಯ್ಯ
- ಮಹಾತ್ಮ ಜೋತಿಬಾ ಫೂಲೆ - ಪ್ರೊ. ಜಿ.ಕೆ. ಗೋವಿಂದ ರಾವ್
- ಎರಡು ನಾಟಕಗಳು - ನರ್ತಕಿಯ ಪೂಜೆ, ಚಾಂಡಾಲಿಕಾ - ಡಾ. ಆರ್.ವಿ. ಭಂಡಾರಿ
- ನಾನು ಓದಿದ ಪುಸ್ತಕ : ಆಷಾಢದ ಒಂದು ದಿನ - ಅಬ್ದುಲ್ ರೆಹಮಾನ್
- ಮೂರು ವಚನಗಳು - ಪ್ರೊ. ಓ.ಎಲ್. ನಾಗಭೂಷಣಸ್ವಾಮಿ
- ಕನ್ನಡ ಮೇಷ್ಟ್ರು ಪರಂಪರೆ ಶ್ರೀಮಂತಗೊಳಿಸಿದ ರಾಜುಮೇಷ್ಟ್ರು - ರಘುನಾಥ ಚ.ಹ.
- ಕಾವ್ಯಾನ್ವೇಷಣೆ : ರಾಮಲಿಂಗಪ್ಪ ಟಿ. ಬೇಗೂರು, ಕಮಲಾ ಮೂರ್ತಿ, ಜ.ನಾ. ತೇಜಶ್ರೀ, ಗಂಗಾ ಸ್ವಾಮಿ, ಹಾಲ್ಕುರಿಕೆ ಶಿವಶಂಕರ್, ಪದ್ಮ ಟಿ., ವಾಸುದೇವ ನಾಡಿಗ್

**ಪೆರಿಯಾರ್: ಪುರೋಹಿತಶಾಹಿ ವಿರುದ್ಧದ ಬಂಡಾಯಗಾರ**

ರೂ. ೧೫/-



* ನವ್ಯೋತ್ತರ ಕನ್ನಡ ಸಾಹಿತ್ಯ ವಿಸ್ತರಿಸಿಕೊಳ್ಳುತ್ತಿರುವ ಬದುಕಿನ ವಿವಿಧ ಆಯಾಮಗಳ ಬಗ್ಗೆ ಬದಲಾಗಲೇಬೇಕಾದ ಸೃಷ್ಟಿ ಕ್ರಿಯೆಯ ಶೈಲಿ, ವಸ್ತು, ವಿನ್ಯಾಸ, ವಿಮರ್ಶಾ ಮಾನದಂಡಗಳ ಬಗೆಗೆ ಮುಕ್ತ ಚರ್ಚೆಯ ಅಗ್ರವೇದಿಕೆ — ಅನ್ವೇಷಣೆ.

* ಹಿರಿಕಿರಿಯ ಲೇಖಕರನ್ನೊಳ ಗೊಂಡು ನಡೆಯುತ್ತಿರುವ ಸಮಕಾಲೀನ ಸಾಂಸ್ಕೃತಿಕ ಸಂವಾದಕ್ಕೆ ತೆರೆದ ವೇದಿಕೆ — ಅನ್ವೇಷಣೆ.

* ಪ್ರಗತಿಪರ ವಿಚಾರಗಳ ದಾಖಲಾತಿಗೆ

ಅನ್ವೇಷಣೆ

## ಚಂದಾ ವಿವರ

ವಾರ್ಷಿಕ ಚಂದಾ ರೂ.೧೦೦/-
ಆಜೀವ ಚಂದಾ ರೂ.೨೦೦೦/-
ಪೋಷಕ ನಿಧಿ ರೂ.೫೦೦೦/-

ಚಂದಾ ಹಣವನ್ನು ಎಂ.ಓ. ಅಥವಾ ಡಿ.ಡಿ. ಮೂಲಕ ಕಳುಹಿಸಿ.

ಎಂ.ಓ. ಕೂಪನ್‌ನಲ್ಲಿ ತಮ್ಮ ಪೂರ್ಣವಿಳಾಸ ನಮೂದಿಸಿ.

**ವಾರ್ಷಿಕ ಚಂದಾ ರೂ.೧೦೦**


ಪ್ರಗತಿಪರ ವಿಚಾರಗಳಿಗೆ

# ಅನ್ವೇಷಣೆ

ಸಂಪುಟ: ೧೯ ಸಂಚಿಕೆ: ೬೬

ಜುಲೈ-ಆಗಸ್ಟ್ ೨೦೦೩

ಸಂಪಾದಕ:
ಆರ್.ಜಿ. ಹಳ್ಳಿ ನಾಗರಾಜ್

ಗೌ|| ಸಂಪಾದಕಿ :
ಎಚ್.ಎಲ್. ಪುಷ್ಪ

ಸಹ ಸಂಪಾದಕ :
ನಜೀರ ಚಂದಾವರ

ಸಂಪಾದಕ ಮಂಡಳಿ:
ಡಾ|| ಸರಜೂ ಕಾಟ್ಕರ್
ಮನು ಬಳಿಗಾರ್
ಬಿ.ಎನ್. ಮಲ್ಲೇಶ್
ಸೀ.ಚ. ಯತೀಶ್ವರ್
ಮಲ್ಲಿಕಾರ್ಜುನಸ್ವಾಮಿ ಮಹಾಮನೆ

ಡಿ.ಟಿ.ಪಿ.:
ಆರಾಧ್ಯ ಜೆ.ಎಸ್.





## ವಿಳಾಸ

ಸಂಪಾದಕ, ಅನ್ವೇಷಣೆ
# ೩೭/೨ಎ, 'ನಿಸರ್ಗ'
ನಾಗರಬಾವಿ ರಸ್ತೆ, ವಿಜಯನಗರ,
ಬೆಂಗಳೂರು - ೫೬೦ ೦೪೦.



ಈ ಸಂಚಿಕೆಯ ಕಲೆ: ರವಿಕುಮಾರ್ ಅಜ್ಜೆಪುರ, ಎಂ.ಎಸ್. ಮೂರ್ತಿ



ದೂರವಾಣಿ : 080-340 4244


ಸಾಂಸ್ಕೃತಿಕ ಚಟುವಟಿಕೆಗಳಿಗೆ




ಸಾಧಕರು - ೧

# ಪೆರಿಯಾರ್: ಪುರೋಹಿತಶಾಹಿ ವಿರುದ್ಧದ ಬಂಡಾಯಗಾರ

- ಆರ್.ಜಿ. ಹಳ್ಳಿ ನಾಗರಾಜ್

**ಚ**ಲನಶೀಲ ಬದುಕಿನಲ್ಲಿ ಸಮೂಹದೊಟ್ಟಿಗೆ ಹೆಜ್ಜೆ ಗುರುತು ಮೂಡಿಸಿಕೊಂಡ ವ್ಯಕ್ತಿ ಹೊಸತರ ಅನ್ವೇಷಣೆಗೆ ಹಾತೊರೆಯುತ್ತಾನೆ. ಪರಂಪರಾಗತ ಹಾಗೂ ಸಾಂಪ್ರದಾಯಿಕ ಬದುಕಿನಿಂದ ಭಿನ್ನ ನೆಲೆ ಹುಡುಕಲು ಬದಲಾವಣೆ ಅರ್ಥಾತ್ ಪರಿವರ್ತನೆಯನ್ನು ತರುವ ಪ್ರಯತ್ನವೇ ಹೋರಾಟದ ಹೊಸ ಆವಿಷ್ಕಾರ. ಇದನ್ನು ಸಮೂಹ ಚಳವಳಿ ಅಥವಾ ಸಾಮಾಜಿಕ ಚಳವಳಿಗೆ ಬಂಧಿಯಾಗಿಸಬಹುದು.

ನಮ್ಮ ಮನಸ್ಸು ಭಾರತದ ಇತಿಹಾಸ ಪರಂಪರೆಗೆ ಹೊರಳಿದರೆ ಇಲ್ಲಿನ ಹೋರಾಟ ಪ್ರಜ್ಞೆ ಒಂದಲ್ಲಾ ಒಂದು ವಿಧದಲ್ಲಿ ಮಾರ್ಗಸೂಚಿಯಾಗಿದೆ. ಅದು ಜನಪರ ಕಾಳಜಿಯಿಂದ ಕೂಡಿದ್ದಾದರೆ ಅದಕ್ಕೊಂದು ವಿಶಾಲ ದೃಷ್ಟಿಕೋನ ಪ್ರಾಪ್ತವಾಗುತ್ತದೆ. ಹೀಗಾಗಿ, "ಪ್ರತಿಯೊಂದು ಚಳವಳಿಯ ಹಿಂದೆ ಒಂದು ತತ್ವಾದರ್ಶ ಅಥವಾ ಉದ್ದೇಶ್ಯವಿರುತ್ತದೆ. ಪರಿವರ್ತನೆಯನ್ನು ಬಯಸುವ ಮತ್ತು ಅದಕ್ಕಾಗಿ ಶ್ರಮಿಸುವ ನಾಯಕರೂ, ಬೆಂಬಲಿಗರೂ, ಇರುತ್ತಾರೆ. ಚಳವಳಿಯನ್ನು ನಿಭಾಯಿಸಿಕೊಂಡು ಹೋಗಲು ನಿಧಾನವಾಗಿಯಾದರೂ ಒಂದು ಸಂಘಟನೆ ಬೆಳೆದಿರುತ್ತದೆ. ಅದು ಚಳವಳಿಕಾರರು ಬಳಸಬಹುದಾದ ಸತ್ಯಾಗ್ರಹ, ಪ್ರತಿಭಟನೆ,



ಬಹಿಷ್ಕಾರಗಳು ಕ್ಷಣಾರ್ಧದಲ್ಲಿ ಸಂಭವಿಸುವ ಘಟನೆಗಳಲ್ಲ. ಕೆಲವು ಚಳವಳಿಗಳು ರಕ್ತರಂಜಿತ ದಂಗೆಗಳಿಂದ ಪ್ರಾರಂಭಿಸಬಹುದು. ಅಥವಾ ರಕ್ತಮಯ ದಂಗೆಗಳಲ್ಲಿ ಪರ್ಯಾವಸಾನಗೊಳ್ಳಬಹುದು. ಆಗ ಅವು ಚಳವಳಿ ಅಥವಾ ಆಂದೋಲನಗಳಾಗಿ ಉಳಿಯುವುದಿಲ್ಲ. ಏನಿದ್ದರೂ ಅವು ಸಾಮಾಜಿಕ ಪರಿವರ್ತನೆಗಳಾಗಿ ನಡೆಯುವ ಹೋರಾಟಗಳು. ದೀರ್ಘಕಾಲದಿಂದ ಬಾಧಿಸುವ ಸಮಸ್ಯೆಗಳನ್ನು ಬಗೆಹರಿಸುವ ಸಾಮಾಜಿಕ ಪ್ರಯತ್ನಗಳು. ಚಳವಳಿಗಳು ಸಾಮಾಜಿಕ ಶಾಂತಿಗೆ ಭಂಗ ತರುತ್ತವೆ, ಅವು ಅಸ್ವಸ್ಥ ಸಮಾಜದ ಲಕ್ಷಣಗಳು ಎನ್ನುವವರಿದ್ದಾರೆ. ಆದರೆ ವಸ್ತುಸ್ಥಿತಿ ಹಾಗಲ್ಲ. ಅವು ಸಮಾಜಗಳು ಚಲನಶೀಲವಾಗಿರುವ ಸಂಕೇತಗಳಾಗಬಹುದು."

ಮೇಲಿನ ಮಾತುಗಳಿಗೆ ಪೂರಕವಾಗಿ ಚಳವಳಿಯ ವಿವಿಧ ಆಯಾಮುಗಳ ಕಡೆ ಮನಸು ಕೇಂದ್ರೀಕರಿಸಿದರೆ ಅದು ವಿಚಾರಶೀಲರನ್ನೊಳಗೊಂಡು ಎಲ್ಲ ಸ್ತರದ ಜನರನ್ನು ಭಾಗಿಯಾಗುವಂತೆ ಮಾಡುವುದೇ ಆಗಿದೆ. ಹೀಗಾಗಿ ಇಲ್ಲಿ ವಿಚಾರದ ಹಂಚಿಕೆ ಹಾಗೂ ಅರಿವಿನ ಜ್ಞಾನ ದೀವಿಗೆಯೂ ಇದೆ.

ಹತ್ತೊಂಬತ್ತನೇ ಶತಮಾನದ ಭಾರತದ ಇತಿಹಾಸದಲ್ಲಿ ಅನೇಕ ಸಮಾಜ ಸುಧಾರಕರು ಹುಟ್ಟಿ ಬಂದಿದ್ದಾರೆ. ಹಿಂದೂ ಧರ್ಮದ ತಾರತಮ್ಯಗಳಾದ ಜಾತಿ ವ್ಯವಸ್ಥೆ, ಅಸ್ಪೃಶ್ಯತೆ, ಸ್ತ್ರೀಶೋಷಣೆ, ಗುಲಾಮಗಿರಿ, ಮೂಢನಂಬಿಕೆ, ಕಂದಾಚಾರ ಮುಂತಾದ ಅನಿಷ್ಟಗಳ ವಿರುದ್ಧ ಸಾಮಾಜಿಕ ಆಂದೋಲನ ನಡೆಸಿದ ಹಲವು ಮಹನೀಯರು ದಾಖಲಾಗಿದ್ದಾರೆ. ಅವರಲ್ಲಿ ಮಹಾತ್ಮ ಜ್ಯೋತಿಭಾ ಫೂಲೆ, ಅಂಬೇಡ್ಕರ್, ನಾರಾಯಣಗುರು ಮುಂತಾದವರ ಸಾಲಿಗೆ ಈ.ವಿ. ರಾಮಸ್ವಾಮಿ ನಾಯ್ಕರ್ ಸೇರುತ್ತಾರೆ. ದಕ್ಷಿಣ ಭಾರತದ ದ್ರಾವಿಡ ಸಂಸ್ಕೃತಿಯನ್ನು ಎತ್ತಿ ಹಿಡಿದು ವಿಚಾರಕ್ರಾಂತಿ ಎಬ್ಬಿಸಿದ ಈ.ವಿ. ರಾಮಸ್ವಾಮಿ ಅವರನ್ನು 'ಪೆರಿಯಾರ್' ಎಂದೇ ಕರೆಯಲಾಗುತ್ತದೆ.

ವಿಚಾರವಾದದ ಅರಿವಿನ ಮಟ್ಟ ತಲುಪಿದ ದಿನಗಳಲ್ಲಿ ವೈಚಾರಿಕತೆ ಹಾಗೂ ಪರಂಪರೆ ಹುಡುಕುತ್ತ ಹೋದಾಗ ಪೆರಿಯಾರ್ ಅವರಷ್ಟು ಪ್ರಖರವಾಗಿ ದೇವರನ್ನು ನಿರಾಕರಿಸಿ ಮಾತಾಡಿದವರು ಸಿಕ್ಕುವುದು ಕಡಿಮೆ. ನಮ್ಮ ದೇಶದಲ್ಲಿ ನಾಸ್ತಿಕ ವಿಚಾರದ ಒಂದು ಪರಂಪರೆಯೇ ಇದೆಯಾದರೂ, ಆಧುನಿಕ ಚಿಂತಕರ ಮನಸ್ಸಿಗೆ ನಾಟುವಂತೆ ಕಟುವಾಗಿ ದೇವರನ್ನು ನಿಂದಿಸಿದ ಪೆರಿಯಾರ್, ದ್ರಾವಿಡ ಸಂಸ್ಕೃತಿಗೆ ತಕ್ಕದ್ದಾಗಿ ವರ್ತಿಸಿದರು. ಅಂತೇ ಅದೊಂದು ಚಳವಳಿಯಾಗಿ ರೂಪುಗೊಂಡಿತು. ದುರದೃಷ್ಟವಶಾತ್ ಎಲ್ಲಿ ವೈಚಾರಿಕತೆಯ ಬೆಳೆ ಹುಲುಸಾಗಿ ಬೆಳೆಯಬೇಕಾಗಿತ್ತೋ ಅಲ್ಲಿಯೇ ಅದರ ಸಮೃದ್ಧಿ ಕಾಣದಾಗಿದ್ದು ವಿಪರ್ಯಾಸದ ಸಂಗತಿ.

ಪೆರಿಯಾರರು ಪುರೋಹಿತಶಾಹಿ ವಿರುದ್ಧ ಸಮರವನ್ನೇ ಸಾರಿ, ಇದಕ್ಕೆ ಬುದ್ಧಿಜೀವಿಗಳು ಸಂಘಟಿತರಾಗಬೇಕೆಂದು ಕರೆಕೊಟ್ಟರು. ಮೂಲತಃ ಬುದ್ಧಿಜೀವಿಯಾದ ಮನುಷ್ಯ ಇತರ ಜೀವಿಗಳಿಗಿಲ್ಲದಂಥ ಬುದ್ಧಿ ಪಡೆದಿದ್ದಾನೆ, ಅವನ ಮೇಲೆ ಸಮಾಜ ಬದಲಾಯಿಸುವ ಗುರುತರ ಜವಾಬ್ದಾರಿ ಇದೆ ಎಂಬುದು ಪೆರಿಯಾರ್‌ರ ತಿಳವಳಿಕೆಯಾಗಿತ್ತು.

ನಾವು ಹೆಸರಿಗೆ ಮಾತ್ರವೇ ಮನುಷ್ಯರು. ನಮ್ಮಲ್ಲಿ ಮಾನವತೆ ಇಲ್ಲ. ಕಾಡು ಜನರಂತೆ ಬಾಳುವ ಬದಲು ಸಮಾಜದಲ್ಲಿ ಮಾನವತೆ ಮೆರೆಯಲು ಸಾಧ್ಯವಾಗುವುದಾದರೆ ಬುದ್ಧಿಜೀವಿ ಪಾತ್ರ ಮಹತ್ವದ್ದಾಗುತ್ತದೆ. ದೇವರು-ದೆವ್ವದ ಹೆಸರಿನಲ್ಲಿ ನಡೆವ ಶೋಷಣೆಗೆ ಕಡಿವಾಣ ಹಾಕಬೇಕು ಎಂದು ಖಾರವಾಗಿ ದೇವರನ್ನು ನಿರಾಕರಿಸಿದ ಪೆರಿಯಾರ್, ದೇವರನ್ನು ಸೃಷ್ಟಿಸಿದವನು ಮುಟ್ಠಾಳ, ದೇವರನ್ನು ಪೂಜಿಸುವವನು ಮೂರ್ಖ, ಹೆಡ್ಡ, ಅನಾಗರಿಕ - ಕಾಡು ಮನುಷ್ಯ, ದೇವರ ಬಗ್ಗೆ ಪ್ರಚಾರ ಮಾಡುವವನು ಅಯೋಗ್ಯ ಎಂದು ಕಟುವಾಗಿ ಮಾತಾಡಿದರು. ದೇವರು ಮತಗಳ ಹೆಸರಿನಲ್ಲಿ ದೇಶದಲ್ಲಿ ಬೇರೂರಿರುವ ಹೆಡ್ಡತನವನ್ನು, ಮೌಢ್ಯ, ಕುರುಡು ನಂಬಿಕೆಯನ್ನು ಖಂಡಿಸುವ ಮತ್ತು ಹೋಗಲಾಡಿಸುವ ಕೆಲಸದಲ್ಲಿ ಮಾತ್ರವೇ ನಾವು ತೊಡಗಿದ್ದೇವೆ - ಎಂದು ಅವರು ಸ್ಪಷ್ಟವಾಗಿ ಸೈದ್ಧಾಂತಿಕ ಚೌಕಟ್ಟಿನಲ್ಲಿ ವಾದ ಮಂಡಿಸಿದರು.

ಪುರೋಹಿತಶಾಹಿಯ ಜತೆಗೆ ಜ್ಯೋತಿಷ್ಯವನ್ನೂ, ಅದನ್ನು ಮುಗ್ಧ ಜನತೆಗೆ ನಂಬಿಸುವ ಜ್ಯೋತಿಷ್ಯಗಾರರನ್ನು ಖಂಡಿಸುವ ಪೆರಿಯಾರ್, ಜ್ಯೋತಿಷಿ ನಡೆಸುವ ಶುಭ ಮುಹೂರ್ತದ ಮದುವೆ ಹಾಗೂ ಶ್ರಾದ್ಧ ಮಾಡುವುದರಲ್ಲಿ ಅರ್ಥವೇನಿದೆ? ಶ್ರಾದ್ಧಾವೆಂಬುದು ಬ್ರಾಹ್ಮಣರು ತಮ್ಮ ಜೀವನೋಪಾಯಕ್ಕಾಗಿ ಕಂಡು ಹಿಡಿದ ಒಂದು ಆಚರಣೆಯೇ ವಿನಾ ಬೇರೇನೂ ಅಲ್ಲ. ಸತ್ತುಹೋದ ಮನುಷ್ಯನ ಜೀವವು ಆತನು ಮಾಡಿದ ಪಾಪ-ಪುಣ್ಯಗಳಿಗೆ ತಕ್ಕಂತೆ ನರಕ-ಸ್ವರ್ಗಗಳನ್ನು ಸೇರುತ್ತದೆಯೆಂಬುದು ಹಿಂದೂ ಧರ್ಮದ ಸಿದ್ಧಾಂತವಾಗಿದೆ. ಹೀಗಿರುವಾಗ ಪಿತೃಲೋಕವೆಂಬುದು

ಯಾವುದು? ಎಲ್ಲಿದೆ? ಎಂದು ವ್ಯಂಗ್ಯವಾಡುತ್ತಾರೆ.

ಶ್ರಾದ್ಧ, ಮದುವೆಗಳು, ನಾಮಕರಣ ಇತ್ಯಾದಿ ಶುಭಾಶುಭ ಆಚರಣೆಗಳೆಲ್ಲ ಬ್ರಾಹ್ಮಣರ ಜೀವನೋಪಾಯಕ್ಕಾಗಿ ರೂಪಿಸಲಾಗಿರುವ ಕಾರ್ಯಕ್ರಮಗಳೇ ವಿನಾ ಇವುಗಳಿಂದ ಬೇರೆ ಏನು ಸಾಧಿತವಾಗಿದೆ? ಈ ತಂತ್ರ ತಿಳಿಯದೆ ಬ್ರಾಹ್ಮಣೇತರರು ತಮ್ಮ ಶಕ್ತಿಗೆ ಮೀರಿದ ಖರ್ಚು ಮಾಡಿ ಮತ್ತಷ್ಟು ಬಡತನಕ್ಕೀಡಾಗುತ್ತಿದ್ದಾರೆ. ಆದ್ದರಿಂದ ವ್ಯರ್ಥವಾಗಿ ಯಾವುದೇ ಮದುವೆ ಮಾಡುವಾಗ ಗಂಡು ಹೆಣ್ಣಿನ ಒಪ್ಪಿಗೆ ತೆಗೆದುಕೊಂಡು ನಾಲ್ಕು ಜನರ ಸಮ್ಮುಖದಲ್ಲಿ ಹಾರ ಬದಲಾಯಿಸಿಕೊಂಡರೆ ಸರಳ ರೀತಿಯ ಮದುವೆ ನೆರವೇರಿಸಿದಂತಾಗುತ್ತದೆ ಎಂದು ಜಾಗೃತಿ ಮೂಡಿಸಿದರು.

ಮದುವೆ ನಾಮಕರಣಗಳಲ್ಲಿ ಮಹಿಳೆಯರ ಪಾತ್ರ ಪ್ರಮುಖವಾಗುತ್ತದೆ. ಅವರು ಕುಟುಂಬ ನಿರ್ವಹಣೆಯಲ್ಲಿ ಗಂಡಿನ ಸಮಾನಕ್ಕೆ ಯೋಚಿಸಬೇಕು. ಅದಕ್ಕಾಗಿ ಅಕ್ಷರವಂತರಾಗಿ ಸಂಸಾರದ ನೊಗವನ್ನು ಹೊತ್ತು ಅರ್ಥಪೂರ್ಣವಾಗಿಸಬೇಕು ಎಂದು ಪೆರಿಯಾರ್ ಆಲೋಚಿಸಿದರು.

ಭಾರತದ ಸ್ವಾತಂತ್ರ್ಯಪೂರ್ವದ ಮಹಿಳೆಯ ಸ್ಥಾನ ಅಮಾನವೀಯವಾಗಿತ್ತು. ಆಗ ಸತಿಪದ್ಧತಿ ಕ್ರೂರ ಅಟ್ಟಹಾಸದಿಂದ ಮೆರೆಯುತ್ತಿತ್ತು. ಮಹಿಳೆಯ ಇಡೀ ಜೀವನವೇ ದಾಸ್ಯತ್ವದಲ್ಲಿ ಕಳೆಯಬೇಕಲ್ಲದೆ, ಸ್ವತಂತ್ರರಾಗಿರಿಸಬಾರದೆಂದು ಮನುಧರ್ಮಶಾಸ್ತ್ರದ ಹೇಳಿಕೆಯನ್ನು ಪಾಲಿಸಲಾಗಿತ್ತು. "ಮಹಿಳೆಯನ್ನು ದೇವರು ಹುಟ್ಟಿಸುವಾಗಲೇ ವ್ಯಭಿಚಾರಿಗಳಾಗಿರುವಂತೆ ಹುಟ್ಟಿಸಿದ್ದಾನೆ" - ಎಂಬ ಮನುಶಾಸ್ತ್ರದ ಪೊಳ್ಳು ವಿಚಾರವನ್ನು ಖಂಡಿಸಿ, ಆಕೆಗೆ ವಿದ್ಯೆ ನೀಡುವ ಪಣತೊಟ್ಟು, ಒಟ್ಟು ಮಹಿಳಾ ಸಂಕುಲವನ್ನೇ ಜಾಗೃತರನ್ನಾಗಿಸಲು ಪೆರಿಯಾರ್ ಸಂಘಟನೆಯ ಸ್ವರೂಪ ಕೊಟ್ಟರು.

ಸ್ವಾತಂತ್ರ್ಯ ಪೂರ್ವದ ಅಂದರೆ ೧೯೩೮ರಲ್ಲೇ ಮದ್ರಾಸಿನಲ್ಲಿ ಮಹಿಳೆಯರಿಂದಲೇ ವಿಶೇಷವಾದ ಮಹಾಧಿವೇಶನವೊಂದನ್ನು ವ್ಯವಸ್ಥೆಗೊಳಿಸಿದರು. ಈ ಅರ್ಥದಲ್ಲಿ ಅದು, ದ್ರಾವಿಡನಾಡಿನಲ್ಲೇ ಪ್ರಪ್ರಥಮ ಅಧಿವೇಶನವೆಂದು ದಾಖಲಾಯಿತು. ಈ ಅಧಿವೇಶನಕ್ಕೆ ಮಹಿಳೆಯೊಬ್ಬರು ಅಧ್ಯಕ್ಷರಾದರು. ಸಹಸ್ರಾರು ಸಂಖ್ಯೆಯಲ್ಲಿ ನೆರೆದಿದ್ದ ಮಹಿಳೆಯರಿಗೆ ಸ್ವಾಭಿಮಾನದ ಬಾಳುವೆ ನಡೆಸಲು ಕರೆನೀಡಿದ ಅವರನ್ನು ಆ ಅಧಿವೇಶನದಲ್ಲಿ ಹಿರಿಯ (ಪೆರಿಯಾರ್) ರೆಂದು ಗೌರವ ಸೂಚಿಸಲಾಯಿತು.

ಪೆರಿಯಾರ್ ಮಾಡಿದಂಥಾದ್ದೇ ಒಂದು ಮಹತ್ವದ ಪ್ರಯತ್ನ ಹಾಗೂ ಕ್ರಾಂತಿಕಾರಕ ನಿರ್ಧಾರ ಮಹಾರಾಷ್ಟ್ರದಲ್ಲಿ ಈ ಹಿಂದೆಯೇ ಆಗಿ ಹೋಗಿತ್ತು. ಮಾನವತಾವಾದಿ ಜ್ಯೋತಿಬಾ ಫೂಲೆ ಮಹಿಳೆಯ ಏಳಿಗೆಗೆ ಶ್ರಮಿಸಿದ್ದರು. ಅನಾಥಾಶ್ರಮ, ವಿಧವೆಯರಿಗೆ ಅಬಲಾಶ್ರಮ, ಸತಿಪದ್ಧತಿ ವಿರುದ್ಧ ಹೋರಾಟ ನಡೆಸಿ ಜಾಗೃತಿ ಮಾಡಿದ್ದರು. ಹೀಗಾಗಿ ಪೆರಿಯಾರ್ ಅವರು ಮಹಿಳೆಯರ ಬಗ್ಗೆ ತಳೆದ ಕಾಳಜಿಗೆ ಜ್ಯೋತಿಬಾ ಫೂಲೆಯವರೂ ಆದರ್ಶವಾಗಿದ್ದರು ಅನ್ನುವುದು ಗಮನಾರ್ಹ.

ಪೆರಿಯಾರ್ ದೃಷ್ಟಿ ವಿಶಾಲವಾದದ್ದು. ಹೆಣ್ಣು ಮಕ್ಕಳ ಸರ್ವಾಂಗೀಣ ಅಭಿವೃದ್ಧಿಗೆ ಅವರು ಚಿಂತಿಸಿದ್ದು ಅಪಾರ. ಹೆಣ್ಣು ಹುಟ್ಟುವಾಗಲೇ ಶಾಪಗ್ರಸ್ತಳಾಗುತ್ತಾಳೆ ಅನ್ನುವುದರಿಂದ ಹಿಡಿದು ಆಕೆಯ ಹಾರೈಕೆ, ವಿದ್ಯೆ, ಮದುವೆ - ಗಂಡನ ಮನೆಯ ಸ್ಥಿತಿಗತಿ, ವರದಕ್ಷಿಣೆ ಪಿಶಾಚಿತನ, ಆಕೆಯ ಲೈಂಗಿಕ ಅಗತ್ಯ, ಗಂಡನ ಅತ್ತೆಯ ಕಾಟಗಳ ಬಗ್ಗೆಯೂ ಚಿಂತಿಸಿ ಅದಕ್ಕೊಂದು ಪರಿಹಾರದ ಸೂತ್ರಗಳನ್ನು ನೀಡಿದ್ದರು. ಹೆಣ್ಣು ವಿದ್ಯಾವಂತಳಾದರೆ ಒಂದು ನೌಕರಿ ಹಿಡಿದು ಮಕ್ಕಳು ಹೆರುವುದನ್ನು ಕಡಿಮೆ ಮಾಡುತ್ತಾಳೆ, ಉದ್ಯೋಗಾವಕಾಶವನ್ನೂ ಕೂಡ ಪುರುಷರಿಗೆ ಸಮಾನವಾಗಿ ಮಹಿಳೆಯರಿಗೂ ಹಂಚುವುದು ಸೂಕ್ತ ಹಾಗೂ ಅಗತ್ಯ ಎಂದು ಅವರು ಪ್ರತಿಪಾದಿಸಿದರು.

ಅಪಾರ ಓದಿನ ಅನುಭವ ಹಾಗೂ ಲೋಕಜ್ಞಾನದ ಅರಿವು ಪೆರಿಯಾರ್‌ಗಿತ್ತು. ಪುರಾಣ ಕತೆಗಳಾಗಿರಬಹುದು, ಇತಿಹಾಸ ಹಾಗೂ ಕಾಲ್ಪನಿಕ ಕತೆಗಳಾಗಿರಬಹುದು, ಸಮಕಾಲೀನ

ಸಮಸ್ಯೆಗಳಿರಬಹುದು. ಅವುಗಳ ಆಳಕ್ಕಿಳಿದು ತಪ್ಪು-ಸರಿ ಒಪ್ಪಿಕೊಳ್ಳುತ್ತಿದ್ದರು. ಹೀಗಾಗಿ ದಶಾವತಾರಗಳ ತಪಾಸಣೆ ನಡೆಸಿ ಮಹಾವಿಷ್ಣುವಿನ ಅಷ್ಟೂ ಅವತಾರಗಳ ಬಗ್ಗೆ ವಿಶ್ಲೇಷಿಸುತ್ತ ಅವೆಲ್ಲ ಹೇಗೆ ಜನಮನದಲ್ಲಿ (ಕಟ್ಟುಕತೆಗಳಾಗಿ) ಬೇರೂರಿವೆ ಎಂದು ವಿವರಿಸುತ್ತಲೇ ವಿಚಾರಹೀನರನ್ನಾಗಿಸುವ ಕುತಂತ್ರವನ್ನು ಬಯಲು ಮಾಡುತ್ತಾರೆ. ಹಾಗೇ ವಿಚಾರವಂತರಿಗೆ ಹಲವು ದೃಷ್ಟಾಂತಗಳನ್ನು ನೀಡಿ ಯೋಚಿಸಲು ಬಿಡುತ್ತಾರೆ. ಜ್ಯೋತಿಷ್ಯವೆಂಬುದೂ ಕೂಡ ಶುದ್ಧ ಅಪನಂಬಿಕೆ, ಅವೈಜ್ಞಾನಿಕ. ಕಾಲ್ಪನಿಕ ಯೋಚನೆಗಳಿಂದ ಮುಗ್ಧರನ್ನೂ, ವಿದ್ಯಾವಂತರನ್ನೂ ದಾರಿ ತಪ್ಪಿಸಲಾಗುತ್ತದೆ. ಇದೊಂದು ಮೋಸಗಾರಿಕೆ. ರಾಹುಕಾಲ, ಗುಳಿಕಕಾಲ, ಯಮಗಂಡಕಾಲ, ಶುಭದಿನ, ಅಶುಭದಿನ - ಎಂಬೆಲ್ಲವೂ ಹುಸಿತನದ ಕಂತೆಗಳೇ ಆಗಿವೆ. ಪಕ್ಷಿಶಾಸ್ತ್ರ, ನಕ್ಷತ್ರಗ್ರಹಗಳ ಫಲ, ವಾರದ - ತಿಂಗಳ - ವರ್ಷಗಳ ಫಲಗಳಷ್ಟೂ ಹುರುಳಿಲ್ಲದವುಗಳು ಎಂದು ಪೆರಿಯಾರ್ ಘಂಟಾಘೋಷವಾಗಿ ಸಾರಿದರು. ಇದರಿಂದಾಗಿ ಶತಮಾನಗಳಿಂದ ಬೇರು ಬಿಟ್ಟಿದ್ದ ಪುರೋಹಿತಶಾಹಿ ವಿಚಾರಗಳಿಗೆ ಧಕ್ಕೆ ಉಂಟಾಯಿತು. ದ್ರಾವಿಡ - ಬ್ರಾಹ್ಮಣ ಎಂಬ ಪಂಗಡಗಳು, ಜಾತಿ ಸಂಘರ್ಷದ ಹಾದಿ ಹಿಡಿದವೇನೋ ಅನ್ನುವ ವಾತಾವರಣವೂ ನಿರ್ಮಾಣವಾಯಿತು.

ದೇವರ ಹೆಸರಿನಲ್ಲಿ ನಡೆಸುವ ಸ್ವೇಚ್ಛಾಚಾರವನ್ನು ನಿದರ್ಶನಗಳ ಮುಖೇನ ಪೆರಿಯಾರ್ ಬಯಲು ಮಾಡಿದರು.

"ನಾವು ಪಡೆದ ಆನಂದದ ಅನುಭವ ಜಗತ್ತಿನ ಎಲ್ಲ ಮಾನವರಿಗೂ ಲಭ್ಯವಾಗಲಿ" ಎಂಬ ನಾಣ್ಣುಡಿಯ ಪ್ರಕಾರ, ಅವರು ಕೊಟ್ಟ ವೈಚಾರಿಕ ತಿರುಳು ಎಲ್ಲೆಲ್ಲೂ ಪಸರಿಸಲು ವಿಚಾರವಂತರ ಪಾತ್ರ ಗಣನೀಯವಾದದ್ದು. ಸ್ವರ್ಗ, ನರಕ, ದೇವರು, ರಾಕ್ಷಸ, ಮಂತ್ರಗಳಿಗೆಲ್ಲಾ ಅರ್ಥವಿಲ್ಲ. ಕಣ್ಣಿಗೆ ಕಾಣುವ, ಕೇಳುವ, ಸ್ಪರ್ಶಕ್ಕೆ ಸಿಗುವ ವಿಷಯಗಳಷ್ಟೇ ಸತ್ಯ. ಈ ದೇಹವೆಂಬುದು ನಿಜ. ಇಂದ್ರಿಯಗಳಿಗೆ ಸಿಲುಕುವ ಆತ್ಮ ಎಂಬುದಿಲ್ಲ - ಎಂಬ ಚಾರ್ವಾಕ ಸಿದ್ಧಾಂತವನ್ನು ಪೆರಿಯಾರ್ ಅನುಸರಿಸಿದ್ದರು. ಚಾರ್ವಾಕ ದರ್ಶನ ಭಾರತದ ಪ್ರಾಚೀನ ಸಿದ್ಧಾಂತಗಳಲ್ಲಿ ಒಂದು. ಇದನ್ನು ಲೋಕಾಯತವಾದ ಎಂದೂ ಕರೆಯಲಾಗುತ್ತದೆ. ದೇಹಕ್ಕಿಂತ ಬೇರೆಯಾದ ಆತ್ಮವಿದೆ ಎಂಬುದನ್ನಾಗಲೀ ಜನ್ಮಾಂತರ, ಪಾಪಪುಣ್ಯ, ಪರಲೋಕಗಳ ಕಲ್ಪನೆಯನ್ನು ಚಾರ್ವಾಕ ತತ್ವ ಒಪ್ಪುವುದಿಲ್ಲ. ಇಂಥದ್ದೇ ಪೆರಿಯಾರ್ ಬೋಧನೆಗೆ ಬಳಸಿಕೊಂಡಿದ್ದು. ತತ್ಶಃ ಪಾಲಿಸಿದ್ದು.

ಇದರ ಜೊತೆಗೆ ಕರ್ನಾಟಕದ ನೆಲದಲ್ಲಿ ಆಗಿ ಹೋದ ಒಂದು ಸಾಮಾಜಿಕ, ಧಾರ್ಮಿಕ ಕ್ರಾಂತಿಯ ಹರಿಕಾರ ಬಸವಣ್ಣ ಹಾಗೂ ಅವನ ಅನುಯಾಯಿಗಳ ವೈಚಾರಿಕ-ವಿಚಾರಗಳು ಇಲ್ಲಿ ಸ್ಮರಣೀಯ. ಇಪ್ಪತ್ತನೇ ಶತಮಾನದಲ್ಲಿ ಪೆರಿಯಾರ್ ಯಾವುದರ ವಿರುದ್ಧ ಹೋರಾಟ ಮಾಡಿದರೋ ಅಂಥದ್ದೇ ಇಲ್ಲಾ ಅದಕ್ಕಿಂತ ಹಲಪಟ್ಟು ಹೆಚ್ಚು ಕ್ರಾಂತಿಕಾರಕವಾಗಿ ಹನ್ನೆರಡನೇ ಶತಮಾನದ ಶರಣರು (ಬಸವಣ್ಣನನ್ನು ಒಳಗೊಂಡು) ನಡೆಸಿದ್ದಾರೆ. ಇದರಿಂದಾಗಿ ಜಾತಿ ವ್ಯವಸ್ಥೆ, ಅಂತರಜಾತೀಯ ವಿವಾಹ, ಪುರೋಹಿತಶಾಹಿ ವಿರುದ್ಧ ಹೋರಾಟ - ಇವೆಲ್ಲಾ ಅಂದೇ ಶರಣರಿಂದ ಚಾಲನೆಗೆ ಬಂದಿತ್ತು ಅನ್ನುವುದೂ ನಿಜ. ಅದರ ಮುಂದುವರಿಕೆಯಾಗಿ ೧೯-೨೦ನೇ ಶತಮಾನದಲ್ಲಿ ಭಾರತದುದ್ದಕ್ಕೂ ಹಲವು ವಿಚಾರವಂತರು, ಸಾಧಕರು ಸಿಕ್ಕುತ್ತಾರೆ. ಅದರಲ್ಲಿ ಪೆರಿಯಾರರಿಗೆ ಮಹತ್ವದ ಸ್ಥಾನವಿದೆ.

ತಮ್ಮ ಜೀವಿತಾವಧಿಯ ೯೫ ವರ್ಷಗಳಲ್ಲಿ ಸಂತನಂತೆ ಬದುಕಿದ ಪೆರಿಯಾರ್ ಸಂಸಾರಿಗಳಾಗಿಯು ಬೌದ್ಧಿಕ ವಲಯದ ಋಷಿ ಅನ್ನಿಸಿದರು. ಹಾಗೆ ನೋಡಿದ್ದರೆ ಪೆರಿಯಾರ್ (ಈರೋಡು ವೆಂಕಟರಾಯಸ್ವಾಮಿ ನಾಯ್ಕರ್) ಶಾಲೆಗೆ ಹೋಗಿ ಶಿಕ್ಷಣ ಪಡೆದವರಲ್ಲ. ಈರೋಡಿನಲ್ಲಿ ವ್ಯಾಪಾರಿಗಳಾಗಿದ್ದವರು ಮುಂದೆ ರಾಜಕೀಯ ಆಸಕ್ತಿ ಬೆಳೆಸಿಕೊಂಡು ಪುರಸಭೆ ಅಧ್ಯಕ್ಷರೂ ಆದವರು. ಸ್ವಾತಂತ್ರ್ಯ ಚಳವಳಿಯಲ್ಲಿ ಭಾಗವಹಿಸಿದ್ದರೂ, ಅಸ್ಪೃಶ್ಯತೆ ನಿರ್ಮೂಲನಕ್ಕಾಗಿ ಜೀವನ ಮುಡುಪಿಟ್ಟರು.

'ದ್ರಾವಿಡ ಕಜಗಂ' (ಕಾಳಗಂ) ಎಂಬ ರಾಜಕೀಯ ಸಂಘಟನೆ ಪಕ್ಷ ಕಟ್ಟಿ ಆ ಮೂಲಕ ಯುವ ಮನಸ್ಸುಗಳನ್ನು ತಮ್ಮೆಡೆಗೆ ಸೆಳೆದರು. ದಿನದಿಂದ ದಿನಕ್ಕೆ ಪಕ್ಷ ಜನಪ್ರಿಯತೆ ಗಳಿಸಿತು. ದ್ರಾವಿಡ ಸಂಸ್ಕೃತಿಯನ್ನು ಎತ್ತಿ ಹಿಡಿಯಲು ಪೆರಿಯಾರ್ ದ್ರಾವಿಡ ಕಜಗಂ ಕಟ್ಟಿ, ಇದಕ್ಕೊಂದು ವಿಶಿಷ್ಟ ಸ್ಥಾನ ಕಲ್ಪಿಸಿದರು. ಈ ಸಂಸ್ಕೃತಿಯನ್ನು, ಇದರ ಹಿರಿಮೆಯನ್ನು ಆರ್ಯರ ಕಾಲದಿಂದಲೂ ಕಡೆಗಣಿಸುತ್ತಾ ಬರಲಾಗಿತ್ತು.

ಪೆರಿಯಾರ್ ಅವರ ಪ್ರಕಾರ ರಾಮಾಯಣದ ಕಥೆ ಯಾ ಮಹಾಕಾವ್ಯ ದ್ರಾವಿಡ ಸಂಸ್ಕೃತಿಯನ್ನು ಅವಹೇಳನ ಮಾಡುವ 'ಕೀಳುಕೃತಿ'. ಹೀಗಾಗಿ ಅವರು ರಾಮನ ಬಗೆಗೆ, ಹಿಂದುಗಳ, ಇತರ ದೇವತೆಗಳ ಬಗೆಗೆ ಅಸಭ್ಯ ಅನ್ನಬಹುದಾದ ಪ್ರದರ್ಶನ ನಡೆಸಿ ಮೇಲ್ಜಾತಿಯವರ ಕೋಪ - ತಾಪಕ್ಕೂ ಗುರಿಯಾಗಿದ್ದುದುಂಟು.

ರಾಜಕಾರಣದೊಟ್ಟಿಗೆ ವಿಚಾರ ಹರಡುವುದೂ, ಆ ಮೂಲಕ ಜನರನ್ನು ಯೋಚನೆಗೆ ಹಚ್ಚುವುದು ಪೆರಿಯಾರರ ಇಚ್ಛೆಯಾಗಿತ್ತು. ರಾಜಕೀಯ ವಿಚಾರಕ್ಕೆ ಹೆಚ್ಚು ಒತ್ತುಕೊಟ್ಟ ಒಂದು ವರ್ಗ ಪೆರಿಯಾರ್ ಅವರನ್ನು ಒಳಗೊಳಗೇ ವಿರೋಧಿಸತೊಡಗಿತು. ಹೀಗಾಗಿ ದ್ರಾವಿಡ ಕಜಗಂನಲ್ಲಿ ಭಿನ್ನಾಭಿಪ್ರಾಯ ಮೂಡಿ ಸಂಘ ಎರಡಾಗಿ ಒಡೆಯಿತು. ಹೊಸ ದ್ರಾವಿಡ ಮುನ್ನೆಟ್ರ ಕಜಗಂ ಹುಟ್ಟಿ, ಅದೂ ಜನಪ್ರಿಯವಾಯಿತು. ಮುಂದೆ ಇದು ತಮಿಳುನಾಡಿನ ರಾಜಕೀಯ ವಾತಾವರಣವನ್ನೇ ಬದಲಾಯಿಸಿಬಿಟ್ಟಿತು. ಅಣ್ಣಾದೊರೈ ತಮಿಳುನಾಡಿನ (ಅಂದಿನ ಮದ್ರಾಸ್) ಚುಕ್ಕಾಣಿ ಹಿಡಿದರು. ಪೆರಿಯಾರ್ ಭಾವಿಸಿಕೊಂಡಂತೆ ರಾಜಕೀಯ ವಾತಾವರಣ ನಿರ್ಮಾಣವಾಗದ್ದರಿಂದಾಗಿ ನೋವುಂಡರು. ಹತಾಶಭಾವನೆ ತಾಳದೆ ತಮ್ಮ ಹೋರಾಟವನ್ನು ಇಳಿವಯಸ್ಸಲ್ಲೂ ಮುಂದುವರೆಸಿದರು. ತ್ರಿಭಾಷಾ ಸೂತ್ರ ಜಾರಿಯಲ್ಲಿದ್ದರೂ, ಹಿಂದಿ ಹೇರಿಕೆ ಅತಿಯಾದಾಗ ಮದ್ರಾಸ್ ಪ್ರಾಂತ್ಯದಿಂದ ಭಾರೀ ಪ್ರತಿಭಟನೆ ಎದುರಾಯಿತು. ಹೀಗಾಗಿ ಪೆರಿಯಾರ್ ಹಿಂದೀ ವಿರೋಧಿ ಚಳುವಳಿ ಆರಂಭಿಸಿದರು. ಅಂಗಡಿಗಳಲ್ಲಿ ದೇವನಾಗರಿ ಅಕ್ಷರಗಳಿರುವ ಹೆಸರು, ಹಲಗೆಗಳನ್ನು ಅಳಿಸಿದರು. ಭಾರತ ಸಂವಿಧಾನವನ್ನು ವಿರೋಧಿಸಿ ಅದರ ಪ್ರತಿಯನ್ನು ಸಾರ್ವಜನಿಕ ಸ್ಥಳದಲ್ಲಿ ಸುಟ್ಟುಹಾಕಿದರು.

ಭಾರತ ಸಂವಿಧಾನ ಕೆಳಜಾತಿಯವರಿಗೆ ವಿಶೇಷ ಸವಲತ್ತು ಕಲ್ಪಿಸಿಲ್ಲ ಎಂಬುದು ಪೆರಿಯಾರ್ ವಾದವಾಗಿತ್ತು. ತಮ್ಮ ಸಾಯುವ ದಿನದವರೆಗಿನ ಹೋರಾಟವನ್ನು ಜೀವಂತವಾಗಿಟ್ಟಿದ್ದ ಪೆರಿಯಾರ್ ಪ್ರತ್ಯೇಕ ತಮಿಳು ರಾಷ್ಟ್ರಕ್ಕಾಗಿ ಚಳವಳಿ ಸಹಾ ನಡೆಸಿದ್ದರು. ಬಿಳಿ ನೆರೆದ ಗಡ್ಡದ ಹಣ್ಣು ಹಣ್ಣು ಮುದುಕ ಪೆರಿಯಾರ್ ಅವರಲ್ಲಿದ್ದ ಹೋರಾಟದ ಕೆಚ್ಚು ದಾಖಲಾರ್ಹ. ೧೯೭೩ ಡಿಸೆಂಬರ್ ೨೪ರಂದು ಪೆರಿಯಾರ್ ತೀರಿಕೊಂಡಾಗ ೯೫ ವರ್ಷ ವಯಸ್ಸಾಗಿತ್ತು.

ಪೆರಿಯಾರ್ ಕಣ್ಮರೆಯಾದರೂ ಅವರು ಹಲವು ದಶಕಗಳ ಕಾಲ ವಿಚಾರವಂತರ ಮನಸ್ಸಲ್ಲಿ ಹಸಿರಾಗಿರುತ್ತಾರೆ. ಹೋರಾಟ - ವೈಚಾರಿಕತೆ - ವಿಚಾರವಂತಿಕೆ ಎಲ್ಲಿಯವರೆಗೆ ಜೀವಂತವಾಗಿರುತ್ತದೋ ಅಲ್ಲಿಯವರೆಗೆ "ಪೆರಿಯಾರ್" ಕೂಡ ಜೀವಂತ!

**ಗ್ರಂಥ ಋಣ:**

೧. ಕಿರಿಯರ ವಿಶ್ವಕೋಶ: ಸಂ: ನಿರಂಜನ (ಭಾರತದ ಕತೆ)

೨. ಪೆರಿಯಾರ್ ಚಿಂತನೆಗಳು: ವೇಮಣ್ಣ: ಚಿಂತಕರ ಚಾವಡಿ, ಬೆಂಗಳೂರು

೩. ಕರ್ನಾಟಕದ ಸಾಮಾಜಿಕ ಚಳವಳಿಗಳು: ನಾಗೇಶ್ ('ಸುಧಾ' ವಿಶೇಷಾಂಕ ೧೯೯೭)

# ಅಲ್ಲಮಪ್ರಭು ವಚನಗಳಲ್ಲಿ ಕಾವ್ಯ ಹಾಗೂ ಅನುಭಾವದ ಅದ್ವೈತ *

- ಪ್ರೊ. ಎಸ್.ಜಿ. ಸಿದ್ಧರಾಮಯ್ಯ

ಪಂಪಪೂರ್ವಯುಗದಿಂದ ಹಿಡಿದು ಇಲ್ಲಿನವರೆಗಿನ ಕನ್ನಡದ ಸಾಂಸ್ಕೃತಿಕ ಜ್ಞಾನ ಪ್ರತಿಭೆಗಳನ್ನು ಗಮನಿಸಿದರೆ ಅಲ್ಲಮಪ್ರಭು ಒಂದು ಬೆರಗು. ವೈಯಕ್ತಿಕ ಜೀವನ ವಿವರಗಳಿಂದ ಹಿಡಿದು ವಚನಗಳ ಅನುಭಾವಿಕ ಗ್ರಹಿಕೆಯವರೆಗೆ ಒಂದು ಸವಾಲಿನಂತೆ ಎದುರಿಗಿರುವ ದಂಡಕಾರಣ್ಯ. ಒಳಹೊಕ್ಕ ಮೇಲೆ ಅಲ್ಲಿನ ಹಿಂಚಲನೆ ಮುಂಚಲನೆ ಅಡ್ಡಚಲನೆಗಳ ಕ್ರಮಣದಲ್ಲಿ ಪರಿಭಾವನೆಗೆ ದಕ್ಕುವ ನೋಟ ಜೀವನ ಸೌಂದರ್ಯದ ಒಂದು ಸುಂದರ ತೋಟ.

"ಅಲ್ಲಮನು ಮನಸ್ಸಿನ ತೋಟಗಾರ, ಏಕಾಂಗಿಯಲ್ಲ. ಜಗತ್ತಿನ ತೋಟಗಾರರ ಪರಂಪರೆಗೆ ಸೇರಿದವನು. ಅಜ್ಞಾತ ತತ್ವಪದಕಾರರ ಸೂಫಿಗಳು, ಮೌಖಿಕರು, ಸಂತರು, ಮಹಾಸಿದ್ಧರು, ಅನುಭಾವಿಗಳು ಝೆನ್ ಮತ್ತು ತಾವೋ ಗುರುಗಳು ಕಟ್ಟಿದ ಬಹುದೊಡ್ಡ ಪರಂಪರೆ ಇದು. ಪರಂಪರೆಯ ಮುಂದುವರಿಕೆಯ ಮತ್ತೊಬ್ಬ ತೋಟಗಾರ ಅಲ್ಲಮಪ್ರಭು. ಈ ಪರಂಪರೆ ನಿರ್ಮಾಣ ಮಾಡಿದ ಸಾಹಿತ್ಯದಲ್ಲಿ ತೋಟ ಅತ್ಯಂತ ಮಹತ್ವದ ಸಂಕೇತ. ಭವದ ತೋಟಗಾರ ದೇಹವನ್ನು ದಂಡಿಸುತ್ತಾನೆ. ಭವಗೆಟ್ಟ ತೋಟಗಾರನಿಗೆ ದಂಡನೆ ಯೋಗ್ಯವಲ್ಲ. ಮನೋದಂಡನೆಯಿಂದ ದೇಹವನ್ನು ದೇಹದಂಡನೆಯಿಂದ ಮನಸ್ಸನ್ನು ಪಳಗಿಸುವ ವ್ಯಾಯಾಮ ಅವನಿಗೆ ಸಲ್ಲದು. ಪಳಗಿಸುವುದು ಬೇಟೆಗಾರನ ಕೆಲಸ. ಹಿಂಸೆಯ ಒಳಗು, ಹಿಂಸೆ ಅನುಭಾವದ ಹೊರಗು, ಸ್ವಾಭಾವಿಕ ಉಸಿರಾಟದ ಕ್ರಿಯೆಯಂತೆ ಉಸಿರಾಟದ ಲಯವನ್ನು ಅರಿತು ಚಿತ್ತ ಸಮತೋಲನ ಸಾಧಿಸಿ ಮನೋಮಯವಾದ ಲೋಕಸತ್ಯಗಳನ್ನು ಕಾಣುವ ಬಗೆ ಅಲ್ಲಮನಂತಹ ತೋಟಗಾರನದು. ಇದೇ ವಾಕು ಮತ್ತು ಮನಪಾಕವಾದ ಸ್ಥಿತಿ. ವಾಕು ಮತ್ತು ಮನಪಾಕವಾದ ತೋಟಗಾರರು ಬೆಳೆದ ಫಸಲು ವಚನ ಸಾಹಿತ್ಯ. ಮನಸ್ಸಿನ ತೋಟದ ಕಳೆಯ ಕಳೆದು ಪ್ರಸನ್ನವಾಗಿ ಸುಂದರವಾಗಿ ನಿಗೂಢವಾಗಿಡಬಲ್ಲ ಸೂಕ್ಷ್ಮ ಕೌಶಲ್ಯ ಅಲ್ಲಮಪ್ರಭುವಿನದು". (ಮುತ್ತಿನ ಹಾರ ಅಲ್ಲಮಪ್ರಭು - ಕೆ.ಬಿ. ಸಿದ್ಧಯ್ಯ ೧೯೯೬ ಪುಟ ೬)

ತನುವ ತೋಂಟವ ಮಾಡಿ ಮನವ ಗುದ್ದಲಿ ಮಾಡಿ
ಅಗೆದು ಕಳೆದೆನಯಾ ಭ್ರಾಂತಿನ ಬೇರ

---

* ಬಸವ ಕಲ್ಯಾಣದಲ್ಲಿ ೫.೬.೨೦೦೩ರಂದು `ಬಸವಪ್ರಜ್ಞೆ ಮತ್ತು ಅನುಭಾವಿ ಅಲ್ಲಮ' ಕುರಿತು ಸಾಣೇಹಳ್ಳಿ ಶ್ರೀ ಪಂಡಿತಾರಾಧ್ಯ ಸ್ವಾಮಿಗಳು ಏರ್ಪಡಿಸಿದ್ದ ವಿಚಾರ ಸಂಕಿರಣದಲ್ಲಿ ಮಂಡಿಸಿದ ಪ್ರಬಂಧ.

ಒಡೆದು ಸಂಸಾರದ ಹೆಂಟೆಯ ಬಗಿದು, ಬಿತ್ತಿದೆನಯ್ಯಾ ಬ್ರಹ್ಮಬೀಜವ.
ಅಖಂಡಮಂಡಲವೆಂಬ ಭಾವಿ, ಪವನವೆ ರಾಟಾಳ
ಸುಷುಮ್ನನಾಳದಿಂದ ಉದಕವ ತಿದ್ದಿ
ಬಸವಗಳೈವರು ಹಸಗೆಡಿಸಿಹವೆಂದು
ಸಮತೆ ಸೈರಣೆಯೆಂಬ ಬೇಲಿಯನಿಕ್ಕಿ,
ಆವಾಗಳೂ ಈ ತೋಂಟದಲ್ಲಿ ಜಾಗರವಿದ್ದು
ಸಸಿಯ ಸಲಹಿದೆನು ಕಾಣಾ ಗುಹೇಶ್ವರಾ.

(೫೩೫: ಪುಟ - ೩೬೩, ಅಲ್ಲಮಪ್ರಭುದೇವರ ವಚನ ಸಂಪುಟ, ಕನ್ನಡ ಪುಸ್ತಕ ಪ್ರಾಧಿಕಾರ ೨೦೦೧)

ಪುರಾಣ ಪುರುಷನಾದ ರಾಮ-ಕೃಷ್ಣರನ್ನು ಕುರಿತು ಲೋಹಿಯಾ ಅವರ ಗ್ರಹಿಕೆ ವಿಶಿಷ್ಟ ಬಗೆಯದು. ರಾಮನದು ಸೀಮಿತ ವ್ಯಕ್ತಿತ್ವ. ಕೃಷ್ಣನದು ಸೀಮಾತೀತ ವ್ಯಕ್ತಿತ್ವ. ಸಾಮಾಜಿಕ ಚೌಕಟ್ಟಿನ ನೀತಿ ನಿಯತಿಗಳಿಗೆ ತನ್ನ ಒಪ್ಪಿಸಿಕೊಂಡು ಅವುಗಳನ್ನು ಚಾಚೂ ತಪ್ಪದಂತೆ ಪಾಲಿಸುವ ಸೀಮಿತ ವ್ಯಕ್ತಿತ್ವ ಶ್ರೀರಾಮನದು. ಕೃಷ್ಣನದಾದರೋ ಸಾಮಾಜಿಕ ಚೌಕಟ್ಟಿನ ನೀತಿ ನಿಯತಿಗಳ ಗಡಿಗೆರೆಗಳನ್ನು ದಾಟಿ ತನ್ನದೇ ಮಾರ್ಗದಲ್ಲಿ ನಡೆದದ್ದೆ ದಾರಿ ನುಡಿದದ್ದೆ ವೇದವೆಂಬಂತೆ ಸಾಗಿದ ಸೀಮಾತೀತ ವ್ಯಕ್ತಿತ್ವ. ಈ ಗ್ರಹಿಕೆಯ ಹಿನ್ನೆಲೆಯಲ್ಲಿ ಅಲ್ಲಮಪ್ರಭುವಿನ ಬದುಕನ್ನು ಪರಿಭಾವಿಸಿದಾಗ ಈ ಎರಡೂ ವೈರುಧ್ಯಗಳು ವೈರುಧ್ಯಗಳ ನೆಲೆಯಲ್ಲಿ ನಿಲ್ಲಿಸದೆ ಎರಡರ ಸಾಂಗತ್ಯದಲ್ಲಿ ಬದುಕಿನ ಪೂರ್ಣತೆಯ ಸಾಫಲ್ಯ ಕಂಡು ಬದುಕಿನ ಭಾಷ್ಯ ಬರೆದ ಅನುಭಾವಿ ಅಲ್ಲಮ. ಈ ಅಪರಿಮಿತ ಜ್ಞಾನಿಯ ಅನುಭಾವದ ದರ್ಶನವಾಗಬೇಕಾದರೆ (ಅಲ್ಲಮನ) ವಚನಗಳ ಓದು ಮರುಓದುಗಳು ಧ್ಯಾನಸ್ಥಿತಿಯಲ್ಲಿ ನಡೆಯಬೇಕಾಗುತ್ತದೆ. ಧ್ಯಾನ ಗುಹೆಯ ಕಣ್ಣುಗಳಿಗೆ ಮಾತ್ರ ಈ ಬಯಲ ಬೆಳಗು ಕಾಣಿಸುತ್ತದೆ. ಈ ಬಯಲಿನ ಬೆಳಗಿಗೆ ವಿವಿಧ ಜ್ಞಾನ ಶಿಸ್ತುಗಳ ತತ್ವದೃಷ್ಟಿಗಳನ್ನು ಮುಖಾಮುಖಿಯಾಗಿಸಬೇಕಾಗುತ್ತದೆ. ಈ ಕಾರ್ಯವನ್ನು ಸೂಕ್ಷ್ಮವಾಗಿ ಹಾಗೂ ಬಹುದೊಡ್ಡ ಪ್ರಮಾಣದಲ್ಲಿ ಮಾಡಲು ಪ್ರಯತ್ನಶೀಲವಾದ ಎರಡು ಚೇತನಗಳು ಡಾ. ಎಲ್. ಬಸವರಾಜು ಹಾಗೂ ಡಾ. ಡಿ.ಆರ್. ನಾಗರಾಜ. ಅಲ್ಲಮನನ್ನು ಅರಿಯಲು ಅಗತ್ಯವಾದ ಯಾನಕ್ಕೆ ಬೇಕಾದ ಕೈಮರವನ್ನು ಡಾ. ಎಲ್. ಬಸವರಾಜು ಅವರು ಒದಗಿಸಿದರೆ, ಆ ದಾರಿಯಲ್ಲಿ ನಡೆದು ಕಂಡುಂಡ ಅನುಭವ ಪ್ರಾಮಾಣ್ಯವನ್ನು ಜ್ಞಾನ ಕಥನವಾಗಿ ಬೆಳಗಿಸಿದ ಯಶೋಗಾಥೆ ಡಿ.ಆರ್. ಅವರದು. ಅವರ `ಅಲ್ಲಮಪ್ರಭು ಮತ್ತು ಶೈವ ಪ್ರತಿಭೆ' ಈ ದಾರಿಯ ಒಂದು ಅನುಭವ ಕಥನ.

ಪ್ರಸ್ತುತ ಈ ಟಿಪ್ಪಣಿಯಲ್ಲಿ ಕಾವ್ಯ ಮತ್ತು ಅನುಭಾವಗಳ ಬಗೆಗೆ ಅಲ್ಲಮಪ್ರಭುವಿನ ಚಿಂತನಾ ದ್ರವ್ಯವನ್ನು ಅವರ ವಚನಗಳ ಚೌಕಟ್ಟಿನಲ್ಲಿ ಗ್ರಹಿಸುವ ಒಂದು ಪುಟ್ಟ ಪ್ರಯತ್ನವಿದೆ.

ಒಂದು ಶತಮಾನದ ಅಂತ್ಯ ಹಾಗೂ ಇನ್ನೊಂದು ಶತಮಾನದ ಆದಿ ಎಂಬುದು ಮನುಷ್ಯನ ಕಾಲಗಣನೆಯ ಒಂದು ತಾಂತ್ರಿಕ ಗ್ರಹಿಕೆ ಮಾತ್ರ. ಆದರೆ ಕಾಲದ ನಿರಂತರತೆಯಲ್ಲಿ ಇವೆಲ್ಲ ಅಸೀಮ ಆಗು ಹೋಗುಗಳು. ಈ ಒಂದು ಅನುಭವವನ್ನು ಅಲ್ಲಮಪ್ರಭುಗಳು ತಮ್ಮ ಒಂದು ವಚನದಲ್ಲಿ ಹೀಗೆ ಹೇಳಿದ್ದಾರೆ:

ಹಿಂದಣ ಅನಂತವನೂ ಮುಂದಣ ಅನಂತವನೂ
ಒಂದು ದಿನ ಒಳಕೊಂಡಿತ್ತು ನೋಡಾ
ಒಂದು ದಿನವನೊಳಕೊಂಡು ಮಾತಾಡುವ
ಮಹಂತನ ಕಂಡು ಬಲ್ಲವರಾರಯ್ಯ ?

ಯಾವ ಒಂದು ದಿನ ಅಥವಾ ಒಂದು ಕ್ಷಣ ವ್ಯಕ್ತಿಯು ಅನುಭವದ ಅನನ್ಯತೆಯಲ್ಲಿ ಮಾತಾಗುತ್ತದೆಯೋ ಅರ್ಥಾತ್ ಸೃಜನಶೀಲವಾಗುತ್ತದೆಯೊ ಅದು ನಿರಂತರತೆಯ ಗತಿಶೀಲತೆಯಲ್ಲಿ ನೆಲದ ಮರೆಯ ನಿದಾನವಾಗುತ್ತದೆ. ನಿದಾನವೆನ್ನುವುದು ಎಲ್ಲರಿಗೂ ಸಿಕ್ಕುವುದಲ್ಲ. ಅದನ್ನು ದಕ್ಕಿಸಿಕೊಳ್ಳಬೇಕಾದರೆ ಅಗೆಯಬಲ್ಲ ಬಗೆ ಬೇಕು. ಬಗೆಯಲ್ಲಿ ಶ್ರಮ ಮತ್ತು ಶಕ್ತಿಗಳು ತುಂಬಿ ಬೆಳಗಬೇಕು. ಈ ಬೆಳಗು ಮಾತ್ರ ನಿಕ್ಷೇಪವನ್ನು ಹೊಳೆಯಿಸುತ್ತದೆ. ಕಾವ್ಯವೆಂಬುದು ಕಾಲದ ನಿರಂತರತೆಯಲ್ಲಿ ಒಂದು ದಿನವನೊಳಕೊಂಡ ನೆಲದ ಮರೆಯ ನಿದಾನ. ಆ ನಿದಾನವನ್ನು ಅಗೆಯಬಲ್ಲ ಬಗೆ ಶೋಧಕರು ಓದುಗರು. ಈ ಬಗೆಯುವ ಪ್ರಕ್ರಿಯೆಯಲ್ಲಿ ನಿರಂತರತೆಯು ನಿತ್ಯನಿತ್ಯ ಹೊಸದು ಹೊಸದು ಆಗುತ್ತದೆ. ಹೀಗೆ ಕಾಲದ ನಿರಂತರತೆಯಲ್ಲಿ ಕ್ಷಣ ನಿದಾನವಾಗುವ ನಿದಾನ ನಿಕ್ಷೇಪವಾಗುವ ಮಹಾಂತನ ಮಾತಿನ ಸಂಸ್ಕೃತಿಯ ಈ ವಿಧಿ ತನುವಿಂಗೆ ತನುವಾಗಿ ಮನಕ್ಕೆ ಮನವಾಗಿ ಜೀವಕ್ಕೆ ಜೀವವಾಗಿ ಇರುವುದು.

**ಶಿಲೆಯೊಳಗಣ ಪಾವಕನಂತೆ**
**ಉದಕದೊಳಗಣ ಪ್ರತಿಬಿಂಬದಂತೆ**
**ಬೀಜದೊಳಗಣ ವೃಕ್ಷದಂತೆ**
**ಶಬ್ದದೊಳಗಣ ನಿಶಬ್ದದಂತೆ**

ಅದರ ಅನುಭವ. ಈ ವಚನದಲ್ಲಿ ಶಿಲೆ ಉದಕ ಬೀಜ ಶಬ್ದಗಳು ಆಕೃತಿ ಸತ್ಯೆಗಳಾದರೆ ಪಾವಕ ಪ್ರತಿಬಿಂಬ ವೃಕ್ಷ ನಿಶಬ್ದಗಳು ಪ್ರಕೃತಿ ಸತ್ಯಗಳು; ಅರ್ಥಾತ್ ಆಕೃತಿಯೊಳಗಣ ಪ್ರಕೃತಿ ವಾಚಿಕೆಗಳು. ಈ ವಾಚಿಕೆಗಳ ಸ್ವರೂಪ ಇಂದ್ರಿಯ ಗೋಚರವಲ್ಲ. ಅಷ್ಟೇ ಅಲ್ಲ ಕ್ಷಣ ಗಣನೆಯ ಬುದ್ಧಿಗೆ ನಿಲುಕುವಂಥವೂ ಅಲ್ಲ. ಹೀಗಾಗಿ ವಾಚಿಕೆಗಳನ್ನು ಓದಿ ಅರ್ಥ ಹೇಳುವ ಅರ್ಥಧಾರಿಗಳು ಜಡವಾದಿಗಳು. ಶಬ್ದಾರ್ಥ ಸಹಿತತ್ವದ ತರ್ಕದಲ್ಲಿ ತಗರ ಹೋರಟೆಗೆ ತೊಡಗಿದವರು. ಇಂಥವರನ್ನು ಅಲ್ಲಮಪ್ರಭುದೇವರು

**ತಲೆಯೊಳಗೆ ನಾಲಗೆಯ ಹಡೆದೆವೆಂದು**
**ಹಲವು ಪರಿಯಲಿ ನೀವು ಗಳಹದಿರಿ ಭೋ**

ಎಂದು ಛೇಡಿಸುತ್ತಾರೆ. ಕಾವ್ಯದ ಅನುಭವ ಅರ್ಥಕ್ಕೆ ಮೀರಿದ ಬೆಳಗು. ಪರಿಭಾವಿಸಬಲ್ಲ ಪ್ರಜ್ಞಾಚಕ್ಷುವಿಗೆ ಮಾತ್ರ ಅಲ್ಲಮಪ್ರಭು ಹೀಗೆ ವಿವರಿಸಿದ್ದಾರೆ.

**ಕಣ್ಣಿಗೆ ಕಣ್ಣು ಕಣ್ಣೊಳು ಕಣ್ಣು**
**ಕಣ್ಣೇ ನೇತ್ರ ನೇತ್ರವೇ ಸೂತ್ರ ಸೂತ್ರವೇ ಲಿಂಗ**
**ಲಿಂಗವೆ ಗುಹ್ಯ ಗುಹ್ಯಕ್ಕೆ ಗುಹ್ಯ**
**ಗೋಪ್ಯಕ್ಕೆ ಗೋಪ್ಯ ರಹಸ್ಯಕ್ಕೆ ರಹಸ್ಯ**
**ಈ ನೇತ್ರ ಮಹಿಮೆಯ ಗುಹೇಶ್ವರ ಬಲ್ಲನಲ್ಲದೆ**
**ಕಣ್ಣುಗೆಟ್ಟಣ್ಣಂಗಳೆತ್ತ ಬಲ್ಲರು ನೋಡೈ !**

ಇಲ್ಲಿ ಅರ್ಥಧಾರಿ ದ್ವೈತ ಬುದ್ಧಿಯನ್ನು ಅಲ್ಲಮಪ್ರಭು ಕಟುವಾಗಿ ತಿರಸ್ಕರಿಸುತ್ತಾರೆ. ಪದಾರ್ಥ ಪರವಾಗಿ ನಿಂತು ಮಾತನಾಡುವ ಉಪಮಾ ಚಕಿತ ಸ್ವಭಾವದವರನ್ನು ಕುರಿತು -

ಬಾಯೆ ಭಗವಾಗಿ ಕೈಯೆ ಇಂದ್ರಿಯವಾಗಿ
ಹಾಕುವ ತುತ್ತುಗಳೆಲ್ಲ ಬಿಂದುಕಾಣರೋ
ಪ್ರಥಮ ವಿಷಯವಿಂತಿರಲು ಗುಹೇಶ್ವರ ಏಕೋ ಅದ್ವೈತ ?

ಎಂದು ಅಂಥವರ ಅದ್ವೈತದ ಎಡಬಿಡಂಗಿ ನೀತಿಯನ್ನು ಕಟುವಾಗಿ ವಿಡಂಬಿಸಿದ್ದಾನೆ. "ಈ ಇಡೀ ವಚನದ ಹಿಂದೆ ಅಭಿನವಗುಪ್ತ ಉನ್ನತೀಕರಿಸುವ ಕೌಳ ತಾಂತ್ರಿಕ ಪ್ರಯೋಗವಿದೆ. ಕೌಳ ತಾಂತ್ರಿಕ ವಿದ್ಯೆಯಲ್ಲಿ ಸಂಭೋಗಕ್ಕೆ ಇರುವ ತಾತ್ವಿಕಾರ್ಥ ಮತ್ತು ಆಧ್ಯಾತ್ಮಿಕ ಸಾಂಕೇತಿಕತೆಯನ್ನು ಕುರಿತ ವಿವಾದವಿದು. ಪ್ರಭು ಶರೀರದ ವಿಷಯೇಂದ್ರಿಯಗಳನ್ನು ಅನುಚಕ್ರ ಎನ್ನುತ್ತಾನೆ. ಗಂಡು-ಹೆಣ್ಣಿನ ಪ್ರವೇಶ ಸಂಸ್ಪರ್ಶದಿಂದ ದೇಹದ ಅನುಚಕ್ರಣ ಸಂಘಟಿಸಿ ಅದ್ವಯಾನುಭವದ ಪೂರ್ವ ಲಕ್ಷಣ ತಲುಪುತ್ತಾರೆ. ಅಲ್ಲಮಪ್ರಭು ಈ ವಚನದಲ್ಲಿ ಯಾವುದನ್ನು ತೀವ್ರವಾಗಿ ವಿಡಂಬಿಸುತ್ತಿದ್ದಾನೋ ಅದರ ಹಿಂದೆ ಒಂದು ಇಡೀ ದೊಡ್ಡ ಪರಂಪರೆಯ ತಿಳಿವಳಿಕೆ ಇದೆ. ತನ್ನ ಸಾಮರಸ್ಯ ವಿಮರ್ಶೆಯಲ್ಲಿ ಅಭಿನವ ಈ ಇಡೀ ಆಧ್ಯಾತ್ಮಿಕ ಸಂಭೋಗ ಪ್ರಕ್ರಿಯೆಯನ್ನು ತನ್ಮಯವಾಗಿ ವಿವರಿಸುತ್ತಾನೆ. ಇಲ್ಲೆಲ್ಲ ಸಂಭೋಗದ ಅಂತಿಮ ಸ್ಥಿತಿ ಎಂದರೆ ಪರಮಶಿವಾನುಭವವೇ". (ಅಲ್ಲಮ ಪ್ರಭು ಮತ್ತು ಶೈವ ಪ್ರತಿಭೆ - ಡಾ. ಡಿ.ಆರ್. ನಾಗರಾಜ ಪುಟ ೮೭)

"ಶರೀರದೊಳಗೆ ದಿವ್ಯದ ಹಂಬಲ ಹೀಗೆ ಸಂಭೋಗ ಸುಖದ ರೂಪದಲ್ಲಿ ಹರಿಯುತ್ತದೆ. ಇಡೀ ವಿಶ್ವ ಶಿವ-ಶಿವೆಯರ ಪ್ರಣಯ ಲೀಲೆಯ ರಂಗ. ಸ್ಪರ್ಶ ಸುಖಿಕ್ಕಾಗಿ ಪ್ರತಿಯೊಂದೂ ವಿಶ್ವದಲ್ಲಿ ತಹತಹಿಸುತ್ತದೆ. ಹೀಗೆ ಅದ್ವೈತಕ್ಕೆ ದಟ್ಟರಾಗದ ರಂಗನ್ನು ಅಭಿನವಗುಪ್ತ ತಂದ. ಶೃಂಗಾರ-ವೈರಾಗ್ಯಗಳೆಂಬ ಭೇದವನ್ನು ಕೃತಕವೆಂದು ಅಳಿಸಿ ಹಾಕಿಬಿಟ್ಟ" - (ಅದೇ) ಆದರೆ ಈ ವಚನದಲ್ಲಿ ಅಲ್ಲಮಪ್ರಭು "ಈ ರೀತಿಯ ಪರಿವರ್ತನೆಗಳ ವೈಚಾರಿಕ ಮೂಲವಿಧಾನವನ್ನೇ ಭಗ್ನಗೊಳಿಸಲು ಪ್ರಯತ್ನಿಸುತ್ತಿದ್ದಾನೆ. ಕೌಳ ಪ್ರತಿಭಾ ಪರಂಪರೆ ಭಗವನ್ನೆ ಬಾಯಿ ಎಂದರೆ ಪ್ರಭು ಅದನ್ನು ಅಕ್ಷರಶಃ ವಿತಂಡಕ್ಕೆ ತಿರುಗಿಸಿ ಬಾಯಿಯನ್ನೆ ಭಗ ಎನ್ನುತ್ತಿದ್ದಾನೆ. ಕೌಳ ಪ್ರತಿಭೆ ಮೈಥುನವನ್ನು ಆಧ್ಯಾತ್ಮಿಕಾನುಭವದ ಗಟ್ಟಿಮಾರ್ಗ ಎಂದರೆ ಅಲ್ಲಮಪ್ರಭು ಮೈಥುನದ ಸಂಬಂಧೀ ದೈಹಿಕ ಕ್ರಿಯೆಯಾದ ಅನ್ನವನ್ನೂ ಏಕೆ ಆಧ್ಯಾತ್ಮೀಕರಿಸಬಾರದು ಎಂದು ವಿಡಂಬಿಸುತ್ತಿದ್ದಾನೆ". (ಅದೇ)

ತುಂಬಿ ಪರಿಮಳವನುಂಡಿತೋ
ಪರಿಮಳ ತುಂಬಿಯನುಂಡಿತೋ
ಲಿಂಗ ಪ್ರಾಣವಾಯಿತೋ ? ಪ್ರಾಣ ಲಿಂಗವಾಯಿತೋ
ಗುಹೇಶ್ವರ ಈ ಉಭಯದ ಭೇದವ ನೀನೆ ಬಲ್ಲೆ

ಅನುಭವ ಮತ್ತು ಅಭಿವ್ಯಕ್ತಿಗಳ ನಡುವಿನ ಸಂಬಂಧವನ್ನು ಹಾಗೂ ಸಾತತ್ಯವನ್ನು ಈ ವಚನ ಸುಂದರವಾಗಿ ಹೇಳುತ್ತಿದೆ. ತುಂಬಿ ಪರಿಮಳದ ರೂಪಕದಲ್ಲಿ ಮಾತನಾಡಿದ ಅಲ್ಲಮ ಲಿಂಗ ಪ್ರಾಣಗಳ ಪರಿಭಾಷೆಯಲ್ಲಿ ಉಭಯಗಳನ್ನು ಮುಖಾಮುಖಿಯಾಗಿಸುತ್ತಾನೆ. ಪ್ರಶ್ನೆಯಾಗಬಹುದಾದ ಚಿಂತನೆಯನ್ನು ಉತ್ತರಮುಖದಲ್ಲಿ ನಿಲ್ಲಿಸಿ ಅನುಭಾವದ ಬೆರಗಿನಲ್ಲಿ ವಚನ ಓದುಗನನ್ನು ಪರಿಭಾವನೆಗೆ ಒತ್ತಾಯಿಸುತ್ತದೆ.

ನುಡಿಯಗಡಣದ ಬೆಳಗು ಮರುತ ಪರಿಮಳದಂತೆ
ಭಾವವಿಲ್ಲದ ಬಯಲು ಪರವು ತಾನೆ
ಅರುಹು ಕುರುಹಿನ ಮರಹು ತೆರಹಿಲ್ಲದಾ ಘನವು
ನಿಂದ ನಿಜಪದದಿಂದ ಪ್ರಭೆಯಾಯಿತು
ಪಿಂಡ ಬ್ರಹ್ಮಾಂಡವನು ಮೀರಿ ತೋರುವ ವಚನ
ಗಗನದುದಯದ ಮೇಲೆ ಘನಕೆ ಗಮನ.

ಕಾವ್ಯದ ಆತ್ಯಂತಿಕ ಪರಿಣಾಮದ ಬಗ್ಗೆ ಹಾಗೂ ಅದರ ಪರಿಭಾವನೆಯ ಬಗ್ಗೆ ಕಠೋರ ಅದ್ವೈತಿಯಾದ ಅಲ್ಲಮಪ್ರಭುವಿನ ಚಿಂತನೆ ಅನನ್ಯವಾದುದು. ವ್ಯಕ್ತಿ ವಿಶಿಷ್ಟ ವಿಮರ್ಶಾಮಾರ್ಗದ ಬೆಳಗಿನಲ್ಲಿ ಈ ಚಿಂತನೆ ಥಾಳಾ ಹರಿದಿದೆ. ಅದು ನೇತ್ರ ಮಹಿಮೆಯನ್ನು ಅರಿಯುವ ಗುಹೇಶ್ವರ ಸ್ಥಿತಿಯ ನೆಲೆ. ಅದ್ವೈತವೆಂಬುದು ಅರ್ಥ ಪರಂಪರೆಯ ಶಾಬ್ದಿಕ ಅನುರಣನವಲ್ಲ; ನಿಶಬ್ದದ ಧ್ಯಾನದಲ್ಲಿ ಅಣುಕ್ಷಣಗಳನ್ನು ಅನಂತವಾಗಿಸಿ ಕಾಲದ ಕಟ್ಟಳೆಯಲ್ಲಿ ಸಾಗಿ ಕಾಲಾತೀತವಾಗುವುದು.

ಮರದೊಳಗಣ ಪತ್ರ ಫಲಂಗಳು
ಮರ ಕಾಲವಶದಲ್ಲಿ ತೋರುವಂತೆ
ಹರನೊಳಗಣ ಪ್ರಕೃತಿ ಸ್ವಭಾವಂಗಳು
ಹರಭಾವದಿಚ್ಛೆಗೆ ತೋರುವುವು
ಲೀಲೆಯಾದಡುಮಾಪತಿ
ಲೀಲೆ ತಪ್ಪಿದಡೆ ಸ್ವಯಂಭೂ ಗುಹೇಶ್ವರ.

ಹರಭಾವದಿಚ್ಛೆ ಲೀಲೆಯಾದಾಗ ಅದು ದ್ವೈತ; ಅದು ಶಬ್ದಾರ್ಥ, ಅದು ಉಮಾ - ಪತಿ. ಲೀಲೆ ತಪ್ಪಿದಾಗ ಅದು ಅದ್ವೈತ, ಅದು ಸ್ವಯಂಭೂ. ಪ್ರಕೃತಿ ಸ್ವಭಾವದಲ್ಲಿ ಸಾಕ್ಷಾತ್ತಾಗುವ ಋತಭಾವ.

ಉರಿಗೆ ಉರಿಯನೆ ತೋರುವೆನು
ಅಮೃತದ ಕಳೆಯಲ್ಲಿ ನಿಲಿಸುವೆನು
ನಾನು ಬ್ರಹ್ಮಸ್ಥಾನದಲ್ಲಿ ಗುಹೇಶ್ವರಾ
ನಿರಂತರವಾಗಿದ್ದೆನಯ್ಯ.

ಅಲ್ಲಮಪ್ರಭು ಅದ್ವೈತದ ಪರಮ ಸ್ವರೂಪವನ್ನು ಅನುಭಾವಿಕ ಸ್ಥಿತಿಯ ಆತ್ಯಂತಿಕ ನಿಲುವನ್ನು ಈ ವಚನದಲ್ಲಿ ಹೇಳಿದ್ದಾರೆ. ಈ ಎಲ್ಲ ವಚನಗಳು ಪ್ರಭುವಿನ ಅದ್ವೈತಭಾವದ ಅನುಭಾವಿಕತೆಯನ್ನು ಮಾತ್ರ ಹೇಳುತ್ತಿಲ್ಲ, ಮಾರ್ಗ ಪರಂಪರೆಯ ಅಭಿವ್ಯಕ್ತಿ ತತ್ವದ ವಿಚಾರ ಮೂಲಗಳಿಗೂ ನಿಷ್ಠುರವಾಗಿ ಮುಖಾಮುಖಿಯಾಗಿರುವುದು ವೇದ್ಯವಾಗುತ್ತಿದೆ.

ಅನುಭಾವದಿಂದ ಹುಟ್ಟಿತ್ತು ಲಿಂಗ
ಅನುಭಾವದಿಂದ ಹುಟ್ಟಿತ್ತು ಜಂಗಮ
ಅನುಭಾವದಿಂದ ಹುಟ್ಟಿತ್ತು ಪ್ರಸಾದ
ಅನುಭಾವದನುವಿನಲ್ಲಿ ಗುಹೇಶ್ವರಲಿಂಗವನುಪಮ ಸುಖಿ.

ಬಹಳ ಜನ ವಚನಕಾರರು ತಮ್ಮ ಕಾಯಕದ ಪರಿಭಾಷೆಯನ್ನು ಬಳಸಿಕೊಂಡು ಕಾಯಕದ ಸ್ವರೂಪ ವರ್ಣನೆಯನ್ನು ಮಾಡುತ್ತಾ ಪರಮಾರ್ಥವನ್ನು ವಿವರಿಸಿದ್ದಾರೆ. ಈ ವಿವರ ಕಾಯ - ಕಾಯಕ ಅನುಭವ-ಅನುಭಾವ ಸಂಬಂಧಗಳ ದ್ವಿಮುಖೀ ಸಂಘರ್ಷದ ಚಿಂತನೆಯ ರೂಪದಲ್ಲಿ ಅಭಿವ್ಯಕ್ತಿ ಪಡೆದದ್ದೇ ಆಗಿದೆ. ಇದು ವಚನ ಸಾಹಿತ್ಯದ ದೊಡ್ಡ ಶಕ್ತಿಯಾದಷ್ಟೇ ಪ್ರಮಾಣದಲ್ಲಿ ವಚನಕಾರರ ಮಿತಿಯೂ ಆಗಿದೆ. ಆದರೆ ಅಲ್ಲಮಪ್ರಭು ಇವರೆಲ್ಲರಿಗಿಂತ ಭಿನ್ನ. ಪ್ರಭುವಿನ ಪರಿಭಾಷೆ ಯಾವ ಕಾಯಕ ಮೂಲಕ್ಕೂ ನಿರ್ದಿಷ್ಟವಾದದ್ದಲ್ಲ ಅಥವಾ ಸೀಮಿತವಾದದ್ದಲ್ಲ. ಜಗತ್ತಿನ ಅನುಭವದ ಗಿರಿಯನ್ನು ಏರಿ ತುತ್ತ ತುದಿಯಲ್ಲಿ ನಿಂತು ಬ್ರಹ್ಮಾಂಡ ದರ್ಶನ ಪಡೆದು ಆಡಿದ ನುಡಿ! ಇಲ್ಲಿ ಮಾತೆಂಬುದು ಶಬ್ದವಾಗುವುದಿಲ್ಲ. ಮಾತೆಂಬುದು ಅರ್ಥವಾಗುವುದಿಲ್ಲ. ಈ ಮಾತಿನ ಸ್ವರೂಪವನ್ನು ಹೇಳಲಿಕ್ಕೆ ಅಲ್ಲಮಪ್ರಭುವಿನ ಮಾತೇ ಯುಕ್ತ -

**ಮಾತೆಂಬುದು ಜ್ಯೋತಿರ್ಲಿಂಗ**
**ಸ್ವರವೆಂಬುದು ಪರತತ್ತ್ವ**
**ತಾಳೋಷ್ಠ ಸಂಪುಟವೆಂಬುದು ನಾದಬಿಂದುಕಳಾತೀತ**
**ಗುಹೇಶ್ವರನ ಶರಣರು**
**ನುಡಿದು ಸೂತಕಿಗಳಲ್ಲ ಕೇಳಾ ಮರುಳೆ.**

ಭಾಷಾಶಾಸ್ತ್ರಜ್ಞನ ಪರಿಭಾಷೆಯಲ್ಲಿ ಭಾಷೆಯ ವಸ್ತು - ವ್ಯಾಕರಣವನ್ನು ವಿವರಿಸುವ ಈ ವಚನ ವ್ಯಕ್ತಿತ್ವದ ವಸ್ತು ವಿಶೇಷತೆಯ ಅವಿನಾ ಸಂಬಂಧದಲ್ಲಿ ಅದರ ಘನವನ್ನು ಸಾರುತ್ತಿದೆ. ಘನವನ್ನು ಸಾರುತ್ತಲೇ ಘನದ ಭೂಮಿಕೆಯ ಘನತೆಯನ್ನು ಬೆಳಗುತ್ತಿದೆ. ಬೆಳಗನುಪಮಿಸಲು ಬಾರದು. ಇದು ಅಲ್ಲಮಪ್ರಭುವಿನ ವಚನಗಳ ಪರಿಭಾಷೆ. ಪ್ರಮಾಣುವೆಂಬ ಪರಿಮಿತಿಯನ್ನು ಒಳಗೊಳ್ಳದ ಪರಿಭಾಷೆ. ಅದರಲ್ಲಿ ಜೀವನ ಧರ್ಮದ ಒಳಗು ಶೋಧಿತವಾದಷ್ಟೇ ಸೂಕ್ಷ್ಮವಾಗಿ ಕಾವ್ಯ ಅನುಭಾವಗಳ ತಾತ್ವಿಕ ಚಿಂತನೆಗೂ ಅದು ಮುಖಾಮುಖಿಯಾಗಿದೆ. ಹೀಗಾಗಿ ಅಲ್ಲಮಪ್ರಭುವಿನ ಪರಿಭಾಷೆ ಏಕಕಾಲಕ್ಕೆ ಧರ್ಮ ಸಾಹಿತ್ಯ ಸಂಸ್ಕೃತಿ ಶಾಸ್ತ್ರಜ್ಞಾನ ಸಂಬಂಧೀ ಪರಿಭಾಷೆಗಳೂ ಆಗುತ್ತವೆ. ಅವುಗಳನ್ನು ಮೀರಿದ ವ್ಯಾಪ್ತಿಯಲ್ಲಿ ಅಖಂಡಿತ ನಾದರೂಪಿಗಳೂ ಆಗಿ ಆರ್ದ್ರವಾಗಿ ಸೆಳೆಯುತ್ತವೆ. ಪ್ರಭುವಿನಲ್ಲಿ ಮಾತ್ರ ಅನ್ನಿಸುವ ವಿಶೇಷತೆ ಇದು. ಅರ್ಥ - ಅನುಭವ, ವಸ್ತು - ವ್ಯಾಕರಣ ಸಂಬಂಧಗಳಿಗೆ ಇರುವ ಕಾಲಿಕ ಹಂಗನ್ನು ಕಳಚುವ ಹಾಗೂ ಅಮೃತತ್ವವನ್ನು ಧಾತುವಾಗಿಸುವ ಬೆಡಗಿನ ನಡಿಗೆ ಇದು. ನೆಲದಲ್ಲಿ ಹುಟ್ಟಿಯೂ ವ್ಯೋಮದಲ್ಲಿ ಸಂಚರಿಸುವ ಮಿಂಚಿನಂತೆ ಅದರ ಪರಿ. ಆದ್ದರಿಂದಲೇ ಅಲ್ಲಮಪ್ರಭುವಿನ ವಚನಗಳಲ್ಲಿ ಕಲೆ ಸಂಸ್ಕೃತಿ ಧರ್ಮ ಚಿಂತನೆಗಳು ಪ್ರತ್ಯೇಕತೆಯ ದಾರಿ ಹಿಡಿದ ಕಾಲುವೆ ಕ್ರಮದ ಚಿಂತನೆಗಳಲ್ಲ. ಪ್ರತ್ಯೇಕಿಸಿ ನೋಡಲಾಗದ ಪರಿಯ ಪರಿಕ್ರಮಗಳು.

**ಮರ್ತ್ಯಲೋಕದ ಕವಿಗಳೆಲ್ಲರೂ ಎನ್ನ ತೊತ್ತಿನ ಮಕ್ಕಳು**
**ದೇವಲೋಕದ ಕವಿಗಳೆಲ್ಲರೂ ಎನ್ನ ಕರುಣದ ಕಂದಗಳು**
**ಹಿಂದೆ ಮುಂದೆಯಾಡುವ ಕವಿಗಳೆಲ್ಲರೂ ಎನ್ನ ಲೆಂಕಬಂಟಂಗಳು**
**ಹರಿ ಬ್ರಹ್ಮ ರುದ್ರ ಈ ಮೂವರೂ ಎನ್ನ ಕಕ್ಷೆಯ ಒಕ್ಕಲು**
**ಗುಹೇಶ್ವರ ನೀನಳಿಯ ನಾ ಮಾವ.**

# ಜೀವನ ಪ್ರೀತಿಯ ಕೊಡಗಿನ ಗೌರಮ್ಮನವರ ಕತೆಗಳು

- ಎಚ್.ಎಲ್. ಪುಷ್ಪ

ಕನ್ನಡ ಸಾಹಿತ್ಯದ ಇತಿಹಾಸವನ್ನು ಗುರುತಿಸುವಿಕೆಯಲ್ಲಿ ನವೋದಯ ಸಾಹಿತ್ಯದ ಹಂತ ಬೇರೆಲ್ಲ ಸಾಹಿತ್ಯ ಪ್ರಕಾರಗಳ ಗುರುತಿಸುವಿಕೆಗಿಂತ ವಿಶಿಷ್ಟವಾದುದು. ಸಾಹಿತ್ಯ ಕೃತಿಯೊಂದಕ್ಕೆ ಹೊರಜಗತ್ತಿನ ಗಾಳಿ ತನ್ನ ಪ್ರಭಾವ, ಪ್ರೇರಣೆಗಳ ಮೂಲಕ ಉಸಿರು ತುಂಬಿದ ಸಂದರ್ಭದಾಗಿತ್ತು. ಬ್ರಿಟೀಷ್‌ರು ಬಂದು ಹೋದ ನಂತರ ಅವರೊಂದಿಗೆ ಅವರ ಆಳ್ವಿಕೆ ಹೊರ ಹೋದ ಹಾಗೆ ಅವರು ಭಾರತೀಯರ ಜನಜೀವನದಲ್ಲಿ, 'ವರ್ಣ-ವರ್ಗ-ಲಿಂಗ' ಭೇದಗಳೆಂಬ ವ್ಯವಸ್ಥೆಯಲ್ಲಿ ಮಾಡಲು ಬಯಸಿದ ಸುಧಾರಣೆ ಅವರೊಂದಿಗೇ ಹೋಗಲು ಸಾಧ್ಯವಿರಲಿಲ್ಲ. ಏಕೆಂದರೆ ಅವರ ಆಳ್ವಿಕೆಯಲ್ಲಿ ಗುಲಾಮರಾಗಿದ್ದ ನಮ್ಮ ಜನ ಅವರನ್ನು ದ್ವೇಷಿಸಿದರೂ ಅವರು ತರಬಯಸಿದ ಹೊಸ ವ್ಯವಸ್ಥೆಯಿಂದ ತಮ್ಮ ಜೀವನದಲ್ಲಿ ಪ್ರಗತಿಸಾಧ್ಯವೆಂದು ನಂಬಿದ್ದರು. ತಮ್ಮ ಆಳ್ವಿಕೆ ಸುಗಮಗೊಳಿಸಿಕೊಳ್ಳಲು ಅವರು ತರ ಬಯಸಿದ ಮಾರ್ಪಾಡುಗಳಿಗೆ ಪರ, ವಿರೋಧಗಳೇನೇ ಇದ್ದರೂ ಅವು ನಮ್ಮ ಜನ ಜೀವನದ ಮೌಲ್ಯಗಳಲ್ಲಿ ಸುಧಾರಣೆ ತಂದಿದ್ದನ್ನಂತೂ ಎಲ್ಲರೂ ಒಪ್ಪಿಕೊಳ್ಳಬೇಕಾಗುತ್ತದೆ.

ಇಂಗ್ಲೀಷ್ ವಿದ್ಯಾಭ್ಯಾಸಕ್ರಮ ನಮ್ಮ ಆಚಾರ, ವಿಚಾರಗಳಲ್ಲಿ ಉಂಟುಮಾಡಿದ ಪರಿಣಾಮ ಕುರಿತು ಶಾಪ ಮತ್ತು ವರಗಳೆಂದು ನಡೆಯುವ ಚರ್ಚೆಗಳ ನಡುವೆಯೂ ಸಾಹಿತ್ಯದ ಮೇಲೆ ಅದರ ಪರಿಣಾಮ ಮಾಸಿಹೋಗುವಂತದಲ್ಲ. ಸಾಹಿತ್ಯ ಜನಜೀವನದ ಪ್ರತಿಬಿಂಬವೂ ಆಗಿರುವುದರಿಂದ, ಸಾಮಾಜಿಕ ಜೀವನದಲ್ಲಿ ಆಗುವ ಏರುಪೇರುಗಳೆಲ್ಲವೂ ಸಾಹಿತ್ಯದಲ್ಲಿ ಚಿತ್ರಿತವಾಗುವುದರಿಂದ ಇಂಗ್ಲೀಷ್ ವಿದ್ಯಾಭ್ಯಾಸ ಕ್ರಮದಿಂದ ಹುಟ್ಟಿದ ಹೊಸ ಪ್ರಜ್ಞೆಯೊಂದರ ಸಮಾಜ, ಆ ಮೂಲಕ ಸಾಹಿತ್ಯದಲ್ಲಿ ಆಗುತ್ತಿರುವ ಬದಲಾವಣೆಗಳನ್ನು ದಾಖಲಿಸಿತು. "೧೯ನೆಯ ಶತಮಾನದ ರಾಷ್ಟ್ರೀಯ ಪುನರುತ್ಥಾನ ಆಂದೋಲನದಲ್ಲಿ ಪ್ರಮುಖವಾಗಿ ತಲೆದೋರಿದ್ದ ಸ್ತ್ರೀಯ ಉದ್ಧಾರದ ಕಳಕಳಿಯೇ ಸ್ವಲ್ಪ ತಡವಾಗಿ ಕನ್ನಡ ನಾಡಿನ ಅಂದಿನ ಬರಹಗಳಲ್ಲಿ ಕಾಣಿಸಿತ್ತು ಎಂಬುದನ್ನು ನೆನೆಯಬೇಕು. ಸ್ತ್ರೀ ಶಿಕ್ಷಣ ಮಸೂದೆಯು ೧೮೮೨ರಲ್ಲೇ ಜಾರಿಗೆ ಬಂದಿದ್ದರೂ ಅದರ ಅವಶ್ಯಕತೆಯನ್ನು ಸಾರಿ ಹೇಳುವುದು. ವಿಧವೆಯರ ಕೇಶಮುಂಡನ, ಬಾಲ್ಯವಿವಾಹ, ಸತಿಪದ್ಧತಿಗಳನ್ನು ವಿರೋಧಿಸುವುದು, ವಿಧವೆಯರ ಮರುವಿವಾಹವನ್ನು

**ಜೀವನ ಪ್ರೀತಿ**

ಕೊಡಗಿನ ಗೌರಮ್ಮ ಬರೆದ ಎಲ್ಲ ಕತೆಗಳು,

ಸಂಪಾದಕ: ಕಾಳೇಗೌಡ ನಾಗವಾರ



ಕನ್ನಡ ಪುಸ್ತಕ ಪ್ರಾಧಿಕಾರ,

ಚಾಮರಾಜಪೇಟೆ, ಬೆಂಗಳೂರು - ೧೮.

ಬೆಂಬಲಿಸುವುದು ಮುಂತಾದ ಸಮಾಜ ಸುಧಾರಣಾ ಕಾರ್ಯಗಳಲ್ಲಿ ದೇಶದ ಬುದ್ಧಿಜೀವಿಗಳು ತೊಡಗಿದ್ದಂತೆ, ಕನ್ನಡದಲ್ಲೂ ಮೊದಲ ತಲೆಮಾರಿನ ಪತ್ರಕರ್ತರು, ಮುದ್ರಕರು, ಬರಹಗಾರರೂ ಪ್ರಯತ್ನಿಸಿದ್ದರು." ಹೀಗೆ ದಮನತೆಗೆ ಒಳಗಾದ ವರ್ಗದವರಿಗೆ, ವರ್ಣದವರಿಗೆ, ಸ್ತ್ರೀ ಸಮುದಾಯಕ್ಕೆ ವಿಶೇಷ ಕಾಳಜಿ ದೊರೆತ ಸಂದರ್ಭವಿದಾಗಿತ್ತು.

ಹೊಸ ಸತ್ವ, ಪ್ರಜ್ಞೆ, ನಮ್ಮಲ್ಲೇ ಇದ್ದ ಒಳಿತು ಕೆಡಕುಗಳ ಚಿತ್ರಣಕ್ಕೆ ತೊಡಗಿದ ಕುವೆಂಪು, ಮಾಸ್ತಿ, ಕಾರಂತರವರ ಸಾಹಿತ್ಯದಲ್ಲಿ ಮೊದಲ ಬಾರಿಗೆ ಸ್ತ್ರೀಯರನ್ನು ಅವರ ಬದುಕಿನ ವಾಸ್ತವದೊಂದಿಗೇ ಚಿತ್ರಿಸುವ ಕೆಲಸ ಮಾಡಲಾಯಿತು. ತಾಯಗರ್ಭದಿಂದ ಆಗತಾನೇ ಹೊರ ಬಂದ ಸ್ವಚ್ಛಗೊಳಿಸದ ಮಗುವಿನಂತೆ ಅವಳು ಇದ್ದ ಪರಿಸರದೊಂದಿಗೇ ಚಿತ್ರಿಸಲಾಯಿತು. ಮಾಸ್ತಿಯವರ ಕತೆಗಳಲ್ಲಿ ಬರುವ ಸ್ತ್ರೀಯರು ಹಿಂದೂ ಧರ್ಮದ ಪಾವಿತ್ರ್ಯತೆಯನ್ನು ಎತ್ತಿ ಹಿಡಿಯುವ, ಮಿಡುಕುವ ಹೃದಯವಿದ್ದು ಜಡಜೀವಿಗಳಂತೆ, ಬದಲಾವಣೆಗೆ ಅರ್ಹರಲ್ಲವೆಂಬಂತೆ ಚಿತ್ರಿತರಾದರು. ಕುವೆಂಪುರವರ ಕಾದಂಬರಿಗಳಲ್ಲಿ ಚಿತ್ರಿತರಾಗುವ ಸ್ತ್ರೀಯರು ಹಳ್ಳಿಯ ಸಹಜ ಚೆಲುವಿನ ತರುಣಿಯರೆಂಬಂತೆ ತಮ್ಮಲ್ಲಿನ ದೊಡ್ಡತನ - ಸಣ್ಣತನಗಳೊಂದಿಗೆ ಸಹಜವಾಗಿ ಚಿತ್ರಿಸಲ್ಪಟ್ಟರು. ಕಾರಂತರ ಕಾದಂಬರಿಗಳಲ್ಲಿನ ಸ್ತ್ರೀಯರು ಇವರಿಬ್ಬರಿಗಿಂತ ವಿಭಿನ್ನವಾಗಿ ಪ್ರತಿಷ್ಠಿತ ಹಾಗೂ ಸ್ಥಾಪಿತ ಮೌಲ್ಯಗಳೊಂದಿಗೆ ಸಂವಾದ ನಡೆಸಬಲ್ಲವರಾಗಿ ಚಿತ್ರಿತಗೊಂಡರು. ಆದರೆ ಇಲ್ಲೆಲ್ಲಾ ಬರುವ ಸ್ತ್ರೀಯರು ಪುರುಷ ನಿರ್ಮಿತ, ಪುರುಷರ ಸಹಾನುಭೂತಿಯಲ್ಲಿ ಎರಕ ಹೊಯ್ದ ಬೊಂಬೆಗಳಂತೆ ಚಿತ್ರಿತರಾದರು.

ಇದೇ ಸರಿಸುಮಾರಿನಲ್ಲಿ ನಂಜನಗೂಡು ತಿರುಮಲಾಂಬಾ, ಕಲ್ಯಾಣಮ್ಮ, ಬೆಳಗಾವಿ ಶ್ಯಾಮಲಾದೇವಿ, ಸರಸ್ವತಿ ಬಾಯಿ ರಾಜವಾಡೆ, ಕೊಡಗಿನ ಗೌರಮ್ಮ ಬರೆಯಲು ಆರಂಭಿಸಿದ್ದು ನಮ್ಮ ಮೊದಲ ತಲೆಮಾರಿನ ಅಕ್ಷರಜ್ಞಾನವನ್ನು ಬಲ್ಲ ಮೇಲುಜಾತಿಯ ಮಧ್ಯಮವರ್ಗಕ್ಕೆ ಸೇರಿದವರಾಗಿದ್ದಾರೆ. ಬ್ರಿಟೀಷರಿಂದ ನಮಗೆ ಬಂದ ಮತ್ತೊಂದು ಮುಖ್ಯ ಕೊಡುಗೆಯೆಂದರೆ ಮುದ್ರಣ ವ್ಯವಸ್ಥೆ. ಈ ಒಂದು ಹೊಸ ವ್ಯವಸ್ಥೆಯಿಂದಾಗಿ ಸಾಹಿತ್ಯ ತನ್ನ ಕ್ಷಿಪ್ರ ಬೆಳವಣಿಗೆಯನ್ನು ಆರಂಭಿಸಿತು. ಈ ಮೇಲೆ ಹೆಸರಿಸಿದ ಎಲ್ಲಾ ಹಿರಿಯ ಲೇಖಕರಲ್ಲಿ ವೇಶ್ಯಾಕುಲದ ಸಂಪ್ರದಾಯದಲ್ಲಿ ಹುಟ್ಟಿ ಆಶ್ಚರ್ಯಕರವಾದ ರೀತಿಯಲ್ಲಿ ವಿದ್ಯಾಭ್ಯಾಸ ಪಡೆದು ಅಂತರಜಾತೀಯ ವಿವಾಹವಾಗಿ ಸಮಾಜಪರ, ಸೃಜನಶೀಲ ಚಟುವಟಿಕೆ ಹಾಗೂ ರಾಷ್ಟ್ರಮಟ್ಟದ ಮಹಿಳಾ ಸಂಘಟನೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡ ಬೆಳಗಾವಿಯ ಶ್ಯಾಮಲಾದೇವಿಯನ್ನು ಗೌರಮ್ಮನವರ ಕತೆಗಳನ್ನು ಸಂಪಾದಿಸಿದ ಡಾ. ಕಾಳೇಗೌಡ ನಾಗವಾರರು ಹೆಸರಿಸುತ್ತಾರೆ. ಈ ಎಲ್ಲಾ ಹಿರಿಯ ಲೇಖಕಿಯರು ಮಾಸ್ತಿ, ಕುವೆಂಪು, ಕಾರಂತ ಪರಂಪರೆಗಿಂತ ಕರ್ಕಿವೆಂಕಟರಮಣ ಶಾಸ್ತ್ರಿ, ಆಲೂರು ವೆಂಕಟರಾಯ, ಕೆರೂರು ವಾಸುದೇವಾಚಾರ್ಯ, ಮುದವೀಡು ಕೃಷ್ಣರಾಯ, ಎಂ.ಎಸ್. ಪುಟ್ಟಣ್ಣನಂತವರ ಪರಂಪರೆಯನ್ನು ಅಂದರೆ ಹೊಸದೊಂದು ನಾಡನ್ನು ಕಟ್ಟುವಲ್ಲಿ ದಮನಕ್ಕೆ ಒಳಗಾದ ಸ್ತ್ರೀ ಕುರಿತಾದ ಕಾಳಜಿಯುಳ್ಳ ಪರಂಪರೆಯೊಂದನ್ನು ಇವರು ಪಾಲಿಸಿದರು. ಹೀಗಾಗಿ ಆರಂಭದ ಹಿರಿಯ ಲೇಖಕಿಯರಲ್ಲಿ ಸಾಮಾಜಿಕ ಅರಿವನ್ನುಳ್ಳ ಸಾಹಿತ್ಯಕ್ಕಿಂತ ಆದರ್ಶವನ್ನು ಮೌಲ್ಯವಾಗುಳ್ಳ ಸಾಹಿತ್ಯ ರಚಿಸಲ್ಪಟ್ಟಿತು. ಇಲ್ಲಿ ಗಮನಿಸಬೇಕಾದ ಬಹುಮುಖ್ಯವಾದ ಅಂಶವೆಂದರೆ ಇವರ್ಯಾರೂ ಅಕ್ಷರಭಾಗ್ಯದಿಂದ ವಂಚಿತರಾಗಿ ಮೇಲೆ ಬಂದ ಕೆಳವರ್ಗ ಸೇರಿದ ಹೆಣ್ಣು ಮಕ್ಕಳಾಗಿರಲಿಲ್ಲ. ಬ್ರಾಹ್ಮಣ ವರ್ಗದಿಂದ ಬಂದ ಮಧ್ಯಮ ವರ್ಗಕ್ಕೆ ಸೇರಿದ ಹೆಣ್ಣು ಮಕ್ಕಳಾಗಿದ್ದರು ಎಂಬುದು ಉಲ್ಲೇಖನಾರ್ಹ.

ತಮ್ಮ ಸಮಕಾಲೀನ ಲೇಖಕಿಯರಿಗಿಂತ ಕೊಡಗಿನ ಗೌರಮ್ಮ ವಿಶಿಷ್ಟರಾಗುವುದು ವಸ್ತುವಿನ ಆಯ್ಕೆ ಹಾಗೂ ಅದರ ನಿರ್ವಹಣೆಯಲ್ಲಿ. ಅವರ ಕತೆಗಳಲ್ಲಿ ಪ್ರೀತಿಯ ಹಲವು ಮುಖಗಳ ಚಿತ್ರಣವಿದ್ದು ಅದು

ತನ್ನ ಎಲ್ಲಾ ಸಿಹಿಕಹಿಯೊಂದಿಗೆ ಅನಾವರಣಗೊಳ್ಳುತ್ತದೆ. ಗೌರಮ್ಮನವರ ಕತೆಗಳಲ್ಲಿ ಅಂದಿನ ಜ್ವಲಂತ ಸಮಸ್ಯೆಯಾಗಿದ್ದ ವಿಧವಾ ವಿವಾಹವನ್ನು ಕುರಿತಾದ ಹಲವು ಕತೆಗಳಿವೆ. ಪ್ರೇಮವೇ ಬಹುಮುಖ್ಯ ಮೌಲ್ಯವಾಗಿ ಜಾತೀಯತೆ ಅರ್ಥಕಳೆದುಕೊಳ್ಳುವ ಪ್ರಸಂಗಗಳಿವೆ. ಹೆಚ್ಚಿನ ವಿದ್ಯಾಭ್ಯಾಸಕ್ಕೆಂದು ಓದಲು ಹೋಗಿ ಮಾನವೀಯತೆ ಮರೆತ ಗಂಡುಗಳಿದ್ದಂತೆ ಅವರಿಗಾಗಿ ಕಾಯುವ ಮುಗ್ಧ ಹೆಣ್ಣುಮಕ್ಕಳ ಚಿತ್ರಣಗಳೂ ಇಲ್ಲಿವೆ. ಈ ರೀತಿಯ ಕಥೆಗಳು ಮಾತ್ರವಲ್ಲದೆ ಪತ್ರಗಳ ಮೂಲಕ ಕಥೆಯನ್ನು ನಿರ್ಮಾಣ ಮಾಡುವ ಹೊಸ ತಂತ್ರಗಾರಿಕೆಯನ್ನೂ ಇಲ್ಲಿ ಬಳಸಲಾಗಿದೆ. ಹಳೆಯ ಕಥೆಯ ನಿರ್ಮಿತಿ ಮಾರ್ಗವನ್ನು ಬಿಟ್ಟುಕೊಟ್ಟು ಹೊಸದೊಂದು ಕಥಾಮಾರ್ಗವನ್ನು ರೂಪಿಸಿಕೊಳ್ಳಬಹುದಾಗಿದ್ದ ಹಲವು ಪ್ರಯೋಗಗಳು ಕೊಡಗಿನ ಗೌರಮ್ಮನವರ ಕಥೆಗಳಲ್ಲಿ ಕಾಣಸಿಗುತ್ತವೆ. ವಸ್ತುವನ್ನು ಅವರು ಆಯ್ಕೆ ಮಾಡಿಕೊಳ್ಳುವ ರೀತಿಯನ್ನು ಅವರ ಒಟ್ಟು ಕತೆಗಳ ಹಿನ್ನೆಲೆಯಲ್ಲಿ ಈ ಕೆಳಗಿನಂತೆ ವಿಭಾಗಿಸಿ ನೋಡಬಹುದಾಗಿದೆ.

**೧. ಪ್ರೀತಿಯ ಸಾಕ್ಷಾತ್ಕಾರಕ್ಕಾಗಿ ಚಡಪಡಿಸುವ ಕತೆಗಳು.**
**೨. ವಿದೇಶದ ಮೋಹಕ್ಕೆ ಸಿಕ್ಕಿಕೊಂಡು ತಮ್ಮ ಹೆಂಡತಿಯರನ್ನು ಮರೆತಂತಹ ಗಂಡಂದಿರ ಕತೆಗಳು.**
**೩. ವಿಧವಾ ಸಮಸ್ಯೆಯನ್ನು ತಣ್ಣಗಿನ ವಿಷಾದದಲ್ಲಿ ಚಿತ್ರಿಸುವ ಕತೆಗಳು.**

೧೯೧೨ರಲ್ಲಿ ಮಡಿಕೇರಿಯಲ್ಲಿ ಹುಟ್ಟಿದ ಗೌರಮ್ಮ ಎಸ್.ಎಸ್. ರಾಮಯ್ಯ ಹಾಗೂ ನಂಜಮ್ಮನವರ ಮಗಳು. ಬಾಲ್ಯದಲ್ಲೆ ತಾಯಿಯನ್ನು ಕಳೆದುಕೊಂಡ ಗೌರಮ್ಮ ಮಡಿಕೇರಿಯಲ್ಲಿ ಎಸ್.ಎಸ್.ಎಲ್.ಸಿ. ತನಕ ಓದಿದ್ದರು. ಗಂಡ ಬಿ.ಟಿ. ಗೋಪಾಲಕೃಷ್ಣ ಆಗರ್ಭ ಶ್ರೀಮಂತ. ಜಿ. ಮಂಜುನಾಥಯ್ಯನವರ ಕಾಫಿ ಎಸ್ಟೇಟ್‌ನ ಮ್ಯಾನೇಜರ್ ಆಗಿದ್ದರು. ಬೇಂದ್ರೆ ಹಾಗೂ ಕಾರಂತರಂಥ ಸಾಹಿತ್ಯ ದಿಗ್ಗಜರು ಗುಂಡುಗುಟ್ಟಿಯಲ್ಲಿದ್ದ ಮಂಜುನಾಥಯ್ಯ ಅವರ ಮನೆಯಲ್ಲಿ ಉಳಿದುಕೊಳ್ಳುತ್ತಿದ್ದುದು ಉಂಟು. ಕಾರಂತರು ತಮ್ಮ **ಬೆಟ್ಟದ** ಜೀವ ಬರೆದದ್ದು ಅದೇ ಪರಿಸರದಲ್ಲಿ ಎಂದು ಪತ್ರಕರ್ತ ಸುಚೇತನ ಸ್ವರೂಪರವರು ಗುರ್ತಿಸುತ್ತಾರೆ. ಗೌರಮ್ಮನವರ ಪ್ರಥಮ ಕಥಾಸಂಕಲನಕ್ಕೆ ಬೇಂದ್ರೆಯವರು ಮುನ್ನುಡಿ ಬರೆದದ್ದು ಅದು ಪ್ರಕಟವಾಗುವ ಮುನ್ನವೇ ತಮ್ಮ ಮನೆಯ ಸಮೀಪದಲ್ಲಿ ಹರಿವ ಹಾರಂಗಿ ನದಿಯಲ್ಲಿ ಈಜಲೆಂದು ಹೋದವರು ಮತ್ತೆ ಹೊರಬರಲೇ ಇಲ್ಲ. ಅಲ್ಲಿಗೆ ಗೌರಮ್ಮನವರ ಬದುಕು ಅವರ ಸಾಹಿತ್ಯ ಕೃಷಿ ಅಂತ್ಯವಾದದ್ದು ಬಹುದೊಡ್ಡ ನಷ್ಟ. ೧೯೩೧ ರಿಂದ ೧೯೩೯ರ ಅವಧಿಯಲ್ಲಿ ಬರೆದ ಕತೆಗಳು **ಕಂಬನಿ** ಹಾಗೂ **ಚಿಗುರು** ಎಂಬ ಹೆಸರಿನಲ್ಲಿ ಪ್ರಕಟವಾಗಿವೆ. ನವೋದಯ ಕಾಲದಲ್ಲಿ ಬಂದ ಗೌರಮ್ಮ ಪ್ರಥಮ 'ಬಂಡಾಯ' ಮತ್ತು 'ಸ್ತ್ರೀವಿಮೋಚನಾವಾದಿ' ಎಂದು ಸುಚೇತನಾ ಸ್ವರೂಪರವರಿಂದ ಕರೆಯಲ್ಪಟ್ಟಿದ್ದಾರೆ. ಅವರು ಇನ್ನಷ್ಟು ಕಾಲ ಬದುಕಿದ್ದರೆ ಲೇಖಕಿಯರ ಕಥಾ ಸಾಹಿತ್ಯಕ್ಕೆ ಹೊಸ ಪ್ರಯೋಗ ಹಾಗೂ ತಂತ್ರಗಳು ಸಿಗುವ ಸಾಧ್ಯತೆ ಇತ್ತು ಎಂಬುದನ್ನು ನಾವು ಮರೆಯುವ ಹಾಗಿಲ್ಲ.

## ೧. ಪ್ರೀತಿಯ ಸಾಕ್ಷಾತ್ಕಾರಕ್ಕಾಗಿ ಚಡಪಡಿಸುವ ಕತೆಗಳು

ಗೌರಮ್ಮನವರ ಬಹುಪಾಲು ಕತೆಗಳಲ್ಲಿ 'ವರ್ಣ-ವರ್ಗ-ಲಿಂಗ' ಭೇದಗಳಿಂದ ನಿರ್ಮಿತಗೊಂಡ, ಬದಲಾವಣೆಗೆ ತಮ್ಮನ್ನು ಒಪ್ಪಿಕೊಳ್ಳಲಾರದ, ಜಡಗೊಂಡ ಸಾಂಪ್ರಿಕ ಮೌಲ್ಯಗಳ ನಡುವೆ ನಲುಗಿ ನಜ್ಜುಗುಜ್ಜಾದ ಪ್ರೇಮವನ್ನು ಅದು ಇದ್ದ ರೂಪದಲ್ಲೇ ಹೊರತೆಗೆಯುವ ಕೆಲಸ ಮಾಡಲಾಗಿದೆ. ಬಹಳಷ್ಟು ಕತೆಗಳಲ್ಲಿ ಎಳೆಜೀವಿಗಳ ಪ್ರಣಯ ಸಮಾಜದ ಜಿಗಿಮುಷ್ಟಿಯ ನಡುವೆಯೂ ಅಲ್ಲಲ್ಲಿ ಮಿಡಿಯುವ,

ಮಿನುಗುವ ಎಳೆಗಳಾಗಿ ಕಾಣಸಿಗುತ್ತವೆ. ಕಂಬನಿ ಎನ್ನುವ ಮೊದಲ ಕಥಾಸಂಕಲನಕ್ಕೆ ಮುನ್ನುಡಿ ಬರೆಯುತ್ತಾ ಬೇಂದ್ರೆಯವರು ಪ್ರೇಮದ ಸ್ವರೂಪ ಗೌರಮ್ಮನವರ ಕತೆಗಳಲ್ಲಿ ಇರುವ ರೀತಿಯನ್ನು ನಾಗವಾರರು ಈ ಮುಂದಿನಂತೆ ಗುರ್ತಿಸುತ್ತಾರೆ: "ಎಲ್ಲ ಕತೆಗಳೂ ವಿಶೇಷವಾಗಿ ಹೆಣ್ಣಿನ ಹೃದಯವನ್ನೇ ಆವಿಷ್ಕರಿಸುತ್ತಿದ್ದರೂ ಸನ್ಯಾಸಿರತ್ನ, ಹೋಗಿಯೇ ಬಿಟ್ಟಿದ್ದ, ಪ್ರಾಯಶ್ಚಿತ್ತ ಈ ಕತೆಗಳಲ್ಲಿ ಗಂಡಿನ ಮುಖವಾಗಿ ಪ್ರಣಯವನ್ನು ಪ್ರದರ್ಶಿಸಿದ್ದಾಗಿದೆ. ಮೊದಲಿನೆರಡು ಕತೆಗಳಲ್ಲಿ ಕತೆಗಾರಿಕೆಯಲ್ಲಿಯೂ ಕಟ್ಟಿನಲ್ಲಿಯೂ ಒಂದು ಚಮತ್ಕಾರವಿದೆ. ಮೂರನೆಯ ಕತೆಯಲ್ಲಿ ಗಂಡಿನಷ್ಟೆ ಹೆಣ್ಣು ಜೀವಾಳವಾಗಿದೆ. ದಿನಚರಿ, ಕಾಗದ ಮೊದಲಾದ ಕಥಾಕಾರಗಳನ್ನು ಅವರು ಕೈಯಾಡಿಸಿ ನೋಡಿದ್ದಾರೆ. ಎಲ್ಲದರಲ್ಲಿ ಅವರ ಕೈ ತಡೆಯಿಲ್ಲದೆ ಸಾಗುವುದು. ಆದರೆ ಈ ಎಲ್ಲ ಕತೆಗಳ ವೈಲಕ್ಷಣ್ಯವೆಂದರೆ ಮಾನಸ ವ್ಯಾಪಾರಗಳ ಹೇಳಿಕೆ. ಕೌಸಲ್ಯಾನಂದನ, ಸುಳ್ಳುಸ್ವಪ್ನ, ಮನುವಿನ ರಾಣಿ, ಯಾರು? - ಮೊದಲಾದವುಗಳಲ್ಲಿ ಗೌರಮ್ಮನವರ ಸಹಾನುಭವವು ನಮ್ಮನ್ನು ಮೆಚ್ಚಿಸುವುದು." *

ಮನುವಿನ ರಾಣಿ, ಹೋಗಿಯೇ ಬಿಟ್ಟಿದ್ದ, ಮುನ್ನಾದಿನ, ಆಹುತಿ - ಈ ಮುಂತಾದ ಕಥೆಗಳು ಪ್ರೇಮದ ಹಲವು ಮುಖಗಳನ್ನು, ವಿಷಾದವನ್ನು ಚಿತ್ರಿಸುವ ರಚನೆಗಳಾಗಿವೆ. ಜಾತಿ ಮತಗಳೆಂಬ ವರ್ತುಲಗಳಲ್ಲಿ, ವರದಕ್ಷಿಣೆಯಂತಹ ಪಿಡುಗುಗಳಲ್ಲಿ ಪ್ರೇಮ ಪಡೆಯಬಹುದಾದ ಸ್ವರೂಪಗಳನ್ನು ಚಿತ್ರಿಸಲಾಗಿದೆ. ಪ್ರೇಮವನ್ನು ದೈವದ ಸಾಕ್ಷಾತ್ಕಾರ, ಒಲವೇ ಜೀವನ ಸಾಕ್ಷಾತ್ಕಾರವೆಂಬಂತಹ ಆದರ್ಶಗಳೆಡೆಯಲ್ಲಿ ಇಟ್ಟು, ಜೀವಂತಿಕೆಯುಳ್ಳ ಸಮಾಜದಲ್ಲಿ ಜಡಸಂಪ್ರದಾಯದಲ್ಲಿ ಪ್ರೇಮದ ಸಾಫಲ್ಯತೆ, ವಿಫಲತೆಗಳನ್ನು ತೂಗಿ ನೋಡಲಾಗಿದೆ. ಮನುವಿನ ರಾಣಿ ಸಾಕಷ್ಟು ಚರ್ಚೆಗೆ ಒಳಗಾಗಿರುವ ಕಥೆ. ಮಾಸ್ತಿಯವರ ವೆಂಕಟಶಾಮಿಯ ಪ್ರಣಯವನ್ನು ನೆನಪಿಸುವ ಈ ಕತೆ ಬೇರೆಯದೇ ಆದ ಅಭಿವ್ಯಕ್ತಿ ಪಡೆದಿದೆ. ಕತೆಯ ನಾಯಕಿ ರಾಜಮ್ಮ ವೇಶ್ಯೆಯರ ಕುಲಕ್ಕೆ ಸೇರಿದವಳಾದರೂ ಆ ಕುಲಕ್ಕೆ ಮೀರಿದ ಸಂಸ್ಕಾರ ಪ್ರೀತಿ ರೂಢಿಸಿಕೊಂಡವಳು. ಸೂಳೆಯರಿಗೆ ಹೃದಯವಿರಬಾರದು ಎಂದು ತಾಯಿ ಎಚ್ಚರಿಕೆ ಕೊಟ್ಟಿದ್ದರೂ ಮೀರಿ ತಮ್ಮಲ್ಲಿಗೆ ಬಂದ ಮನು ಎಂಬುವವನನ್ನು ಪ್ರೀತಿಸುತ್ತಾಳೆ. ಅವಳ ಪ್ರೀತಿಯಲ್ಲೆ ಅರೆಹುಚ್ಚನಾಗಿದ್ದ ಮನುವಿಗಾಗಿ ಸರ್ವಸ್ವವನ್ನೂ ತ್ಯಾಗಮಾಡಿ ಅವನೊಂದಿಗೆ ಈ ಕತೆಯ ನಿರೂಪಕರಾದ ಡಾಕ್ಟರರ ಊರಿಗೆ ಬಂದು ನೆಲೆಸುತ್ತಾಳೆ. ಊರವರ ಕಣ್ಣಿನಲ್ಲಿ ವೇಶ್ಯೆಯೆನಿಸಿಕೊಂಡರೂ ಅವನಿಗಾಗಿ ನಿಷ್ಠೆಯಿಂದ ಬದುಕುತ್ತಾಳೆ. ಅವನ ಜ್ವರ ಮಿತಿಮೀರಿ ಸಾವನ್ನಪ್ಪಿದಾಗ ಊರುಬಿಟ್ಟುಹೋದ ಅವಳು ಕಾಗದದ ಮೂಲಕ ತನ್ನ ಕರುಣಾಜನಕ ಕಥೆಯನ್ನು ತಿಳಿಸುತ್ತಾಳೆ. ಡಾಕ್ಟರನಾದರೂ ಊರ ಜನರ ತಿರಸ್ಕಾರದ ಕಣ್ಣಿನಿಂದಲೇ ಅವಳನ್ನು ವೇಶ್ಯೆಯಾಗಿ ಕಂಡಿದ್ದು ಈಗ ಪಶ್ಚಾತ್ತಾಪದಿಂದ ಮರುಗುತ್ತಾನೆ. ಜನರ ಕಲ್ಪನೆಯಲ್ಲಿನ ರಾಜಮ್ಮ, ಡಾಕ್ಟರ್ ಕಂಡ ರಾಜಮ್ಮ, ಮನುವಿನ ಪ್ರೇಯಸಿ ರಾಜಮ್ಮ ಹಂತದಿಂದ ಹಂತಕ್ಕೆ ಬೆಳೆಯುತ್ತಾ ಕತೆ ಉದಾತ್ತವಾದ ನೆಲೆಯಲ್ಲಿ ಕೊನೆಗಾಣುತ್ತದೆ. ಮಾನವೀಯತೆಯಿಲ್ಲದ ಜನರ ವರ್ತನೆ, ಹುಚ್ಚನಾದರೂ ಮನುವನ್ನು ಬಿಡದ ರಾಜಮ್ಮನ ಮಾನವೀಯತೆಯ ಚಿತ್ರಣ ಕತೆಗೊಂದು ತಾತ್ವಿಕ ಚೌಕಟ್ಟನ್ನು ಒದಗಿಸಿದೆ.

'ಹೋಗಿಯೇ ಬಿಟ್ಟಿದ್ದ!' - ಈ ಕತೆಯಲ್ಲಿ ವಿಭಿನ್ನ ಧರ್ಮೀಯರಲ್ಲಿ ಉಂಟಾದ ಪ್ರೀತಿ ಧರ್ಮವನ್ನು ಮೀರಿ ಬೆಳೆಯಲಾಗದೆ ಹತಾಶ ಸ್ಥಿತಿಯಲ್ಲಿ ಸೋಲನ್ನು ಒಪ್ಪಿಕೊಂಡ ರೀತಿಯನ್ನು ಚಿತ್ರಿಸಲಾಗಿದೆ.

---

* ಸಂ. ಕಾಳೇಗೌಡ ನಾಗವಾರ : ಜೀವನ ಪ್ರೀತಿ - ಕೊಡಗಿನ ಗೌರಮ್ಮ ಬರೆದ ಎಲ್ಲ ಕತೆಗಳು. ಪು.ಸಂ. ೨೯

ಪತ್ರಗಳೋ, ಪತ್ರಿಕೆಯಲ್ಲಿ ಬಂದ ಸುದ್ದಿಗಳೋ ಕತೆಯ ರೂಪ ತಾಳುವುದು ಗೌರಮ್ಮನವರ ಕತೆಗಳಲ್ಲಿ ಕಂಡುಬರುವ ಸಾಮಾನ್ಯ ತಂತ್ರ. ಅದನ್ನು ಕತೆಯ ಆರಂಭದಲ್ಲೆ ಅವರು "ಒಮ್ಮೊಮ್ಮೆ ಕಲ್ಪನೆಗಿಂತಲೂ ನಿಜವು ಆಶ್ಚರ್ಯಕರವಾಗಿರುತ್ತದೆ. ಕೆಲವು ವೇಳೆ ಕಟ್ಟುಕತೆಯೋ ಎನ್ನುವಷ್ಟು ಅಸ್ವಾಭಾವಿಕವೂ ಆಗಿರುತ್ತದೆ. ಈಗ ನಾನು ಹೇಳುವ ವಿಷಯವೂ ಆ ಜಾತಿಗೆ ಸೇರಿದ್ದು. ಕೇಳಿದವರು ಖಂಡಿತ ನನ್ನ ಕಲ್ಪನೆಯ ಪರಿಣಾಮವೆಂದು ಹೇಳದಿರಲಾರರು. ಅದಕ್ಕೋಸ್ಕರವಾಗಿಯೇ ಈ ವಿಷಯಕ್ಕೆ ಸಂಬಂಧಪಟ್ಟ ಪತ್ರಿಕೆಗಳನ್ನೆಲ್ಲ ನಾನು ಜೋಪಾನವಾಗಿಟ್ಟಿರುವುದು. ಯಾರಿಗೆ ಸಂಶಯವಿದೆಯೋ ಅವರು ಬಂದು ಇವುಗಳನ್ನು ಪರೀಕ್ಷಿಸಬಹುದು." ಈ ವಿವರಣೆಯ ಮೂಲಕವೇ ಕತೆಯ ನಿರೂಪಣೆ ಆರಂಭವಾಗುತ್ತದೆ. ತಂದೆ ತಾಯಿ ಕಳೆದುಕೊಂಡು ಬೇರೆಯವರ ಮನೆಯಲ್ಲಿ ಬೆಳೆದು ತನ್ನ ಶ್ರಮದ ಬದುಕಿನಿಂದಲೇ ಮುಂದೆ ಬಂದ ಯುವಕನೊಬ್ಬ ಮುಂದೆ ಮುಸಲ್ಮಾನ ಯುವತಿಯೊಬ್ಬಳನ್ನು ಪ್ರೀತಿಸುತ್ತಾನೆ. ಅವನ ಪ್ರೀತಿಯನ್ನು ಹತ್ತಿಕ್ಕಲು ಹೊರಟ ಆ ಹುಡುಗಿ ಲತೀಫಾಳ ಚಿಕ್ಕಪ್ಪ ಹೆಂಡತಿಯನ್ನು ಕಳೆದುಕೊಂಡ ಮಕ್ಕಳೊಂದಿಗನಾದ ಮುಸಲ್ಮಾನನಿಗೆ ಅವಳನ್ನು ಕೊಡುವ ನಿರ್ಧಾರ ಮಾಡುತ್ತಾನೆ. ತಮ್ಮ ಪ್ರೇಮ ವಿಫಲವಾಗಲು ಬಿಡದ ಅವರು ಸಾವಿನಲ್ಲಿ ಪರಸ್ಪರ ಒಂದಾಗುವ ತೀರ್ಮಾನ ತೆಗೆದುಕೊಂಡರೂ ಲತೀಫಾ ಸತ್ತು, ಬದುಕಿದ ಯುವಕನ ಮೇಲೆ ಕೊಲೆಯ ಆಪಾದನೆ ಬಂದು ಜೇಲಿಗೆ ಹೋಗಬೇಕಾಗುತ್ತದೆ. ಹುಚ್ಚನಲ್ಲದಿದ್ದರೂ ಹುಚ್ಚನೆಂದು ಫಾಸಿಯಾಗದೆ ಸಾವಿಗಾಗಿ ಆಶಿಸುತ್ತಾ ಮೂವತ್ತು ವರ್ಷಕಾಲ ಹುಚ್ಚನಾಗಿದ್ದು ಬಿಡುಗಡೆ ಹೊಂದುತ್ತಾನೆ. ಈ ರೀತಿ ತನ್ನ ಬಿಡುಗಡೆಯ ಕತೆಯನ್ನು ಇತರ ಪ್ರಯಾಣಿಕರಿಗೆ ಹೇಳುತ್ತಲೇ ರೈಲಿನಿಂದ ಹೊರ ಹಾರಿ ಪ್ರಾಣಬಿಡುತ್ತಾನೆ. ಹೀಗೆ ಜಾತಿಮತ ಮೀರಿದ ಪ್ರೇಮದ ಹಿರಿಮೆಯನ್ನು ಸಾರುವಂತೆ ಕತೆ ಚಿತ್ರಿತವಾಗಿದೆ.

'ಮುನ್ನಾದಿನ' ಗೌರಮ್ಮನವರ ಪತಿ ಬಿ.ಟಿ. ಗೋಪಾಲಕೃಷ್ಣರವರು ಕೆಲಸ ಮಾಡುತ್ತಿದ್ದ ಎಸ್ಟೇಟಿನಲ್ಲಿದ್ದ ಕಾಡ ಎಂಬ ಮೇಸ್ತ್ರಿಯನ್ನು ಕುರಿತಾದ ನಿಜ ಕತೆ. ಈ ಕತೆಯ ವಿಶಿಷ್ಟತೆ ಇರುವುದು ಕಾಡನ ಜೀವನದ ದ್ವಿತಿಯಾಂಕಕ್ಕೆ ಕತೆ ನಿಲ್ಲಿಸಿದ್ದ ಗೌರಮ್ಮನವರು ಹೊಳೆಯಲ್ಲಿ ಈಜಲೆಂದು ಹೋಗಿ ತಮ್ಮ ಇಹ ಯಾತ್ರೆ ಮುಗಿಸಿದ ಮುನ್ನಾದಿನ ಬರೆದ ಕತೆಯಾಗಿರುವುದರಿಂದ. ಈ ಕತೆಯೂ ಕೂಡ ಅನ್ಯಧರ್ಮೀಯರ ನಡುವಿನ ಸಫಲ ಪ್ರೇಮವನ್ನು ಕುರಿತಾದ ಕಥೆಯಾಗಿದೆ. ಜೀವನಕ್ಕಾಗಿ ಧರ್ಮವೇ ಹೊರತು ಧರ್ಮಕ್ಕಾಗಿ ಜೀವನವಲ್ಲ ಎಂಬ ನೀತಿ ಈ ಕತೆಯಲ್ಲಿ ವ್ಯಕ್ತವಾಗಿದೆ. ಧರ್ಮ ಮೈಮೇಲಿನ ಅಂಗಿಯಂತೆ ಬದಲಾಗಬೇಕಾಗುತ್ತದೆ ಕೆಲವು ಅನಿವಾರ್ಯ ಸಂದರ್ಭಗಳಲ್ಲಿ ಎಂಬುದು ಈ ಕತೆಯಲ್ಲಿ ವ್ಯಕ್ತವಾಗಿದೆ. ಕಾಡ ಒಂಬತ್ತನೇ ವಯಸ್ಸಿನಲ್ಲಿ ತನ್ನ ತಂದೆಯನ್ನು ಕಳೆದುಕೊಂಡು ತಾಯಿಯ ಎರಡನೆಯ ಮದುವೆಯ ಸಂಸಾರದಲ್ಲಿ ಬದುಕಲಾರದೆ ಓಡಿ ಹೋಗುತ್ತಾನೆ. ಅಲ್ಲಿ ಇಲ್ಲಿ ಅಲೆದು ಕಾಫಿ ತೋಟದಲ್ಲಿ ಕೊನೆಗೆ ನೆಲೆ ನಿಲ್ಲುತ್ತಾನೆ. ದೊರೆಯ ಮೆಚ್ಚುಗೆಗೆ ಪಾತ್ರನಾಗಿ ಜಾತಿಯ ಬಗ್ಗೆ ಕಾಳಜಿಯಿಲ್ಲದ ಯುವಕ ಕಾಡ ಹೊಟ್ಟೆಪಾಡಿಗಾಗಿ 'ಜೊಸೆಫ್ ಕಾಡ'ನಾಗಿ ಮತಾಂತರ ಹೊಂದುತ್ತಾನೆ. ಹರುಕು ಮುರುಕು ಇಂಗ್ಲೀಷ್ ಕಲಿತ ಕಾಡ ಇನ್ನೊಬ್ಬ ಪ್ಲಾಂಟರ್ ಆ ತೋಟವನ್ನು ಕೊಂಡಾಗ ಕುದುರೆಯ ಮೇಲೆ ಹೋಗಿ ಟಪಾಲು ತರುವ ಕೆಲಸ ವಹಿಸಿಕೊಳ್ಳುತ್ತಾನೆ. ಹೀಗೆ ಓಡಾಡುವಾಗ ಮಾಪಿಳ್ಳೆ ಚಿಲ್ಲರೆ ಅಂಗಡಿಯ ಹುಸೇನ್ ಬೀಬಿಯ ಪರಿಚಯವಾಗಿ ಪರಿಚಯ ಪ್ರೇಮಕ್ಕೆ ತಿರುಗುತ್ತದೆ. ಹುಸೇನ್ ಬೀಬಿಯ ಅಣ್ಣ ಮುಮ್ಮು ಕಾಕ ತಂಗಿಯ ಸುಖಕ್ಕೆ ಅಡ್ಡಿ ಬಾರದೆ ಕಾಡನಿಗೆ ತಮ್ಮ ಧರ್ಮಕ್ಕೆ ಮತಾಂತರ ಹೊಂದುವಂತೆ ಕೇಳಿಕೊಳ್ಳುತ್ತಾನೆ. ಕಾಡ ಸುಲಭವಾಗಿ ಪ್ರೀತಿಗಾಗಿ ಧರ್ಮ ಬಿಟ್ಟು ಅವಳನ್ನು ಮದುವೆಯಾಗುತ್ತಾನೆ. ಈ ಕತೆಯಲ್ಲಿ ಲೇಖಕಿಯ ಧರ್ಮವನ್ನು ಕುರಿತಾದ ನಿಲುವು ನೇರ ಹಾಗೂ ಪಾರದರ್ಶಕವಾಗಿದೆ. ಈ ರೀತಿಯ ಆರೋಗ್ಯಕರ ನಿಲುವು

ಗೌರಮ್ಮನವರ ಹಲವು ಕತೆಗಳಲ್ಲಿ ಕಂಡು ಬರುತ್ತದೆ. "ಕಾಡನಿಗೇನು? ಜಾತಿಗೆ ಅವನ ದೃಷ್ಟಿಯಲ್ಲಿ ಮೌಲ್ಯವಿಲ್ಲ. ಎಷ್ಟು ಸುಲಭವಾಗಿ ಕ್ರಿಶ್ಚನ್ ಆಗಿದ್ದನೋ ಅದಕ್ಕಿಂತಲೂ ಹೆಚ್ಚಿನ ಉತ್ಸಾಹದಿಂ ಮುಸಲ್ಮಾನನಾಗಲೊಪ್ಪಿದ. ಹಿಂದೆ ಹಿಡಿ ಕೂಳಿಗಾಗಿ ಜಾತಿ ಬಿಟ್ಟಿದ್ದರೆ ಈಗ ಪ್ರೇಮ ಕಾರಣವಾಗಿತ್ತು ಹುಸೇನ್ ಬೀಬಿಗಾಗಿ ಜೀವಬಿಡಲು ಸಿದ್ಧನಿದ್ದ. ಅವನಿಗೆ ಬೆಲೆಯಿಲ್ಲದ ಜಾತಿಯನ್ನು ಬಿಟ್ಟ ಮಾತ್ರಕ್ಕೆ ಅವಳು ಲಭಿಸುವಳೆಂದಾದ ಮೇಲೆ ಮುಸಲ್ಮಾನ ಧರ್ಮಕ್ಕೆ ಮತಾಂತರ ಹೊಂದಲು ಹೆಚ್ಚು ಸಮಯವಾಗಲಿಲ್ಲ."

ಈ ಮೇಲಿನ ಕತೆಗಳಲ್ಲದೆ ಸನ್ಯಾಸಿ ರತ್ನ, ಕೌಸಲ್ಯಾನಂದನ, ಮರದ ಬೊಂಬೆ ಮುಂತಾದ ಕತೆಗಳಲ್ಲಿ ಪ್ರೇಮ ತನ್ನ ಹತ್ತು ಹಲವು ಮುಖಗಳಲ್ಲಿ ವ್ಯಕ್ತವಾಗಿದೆ. ಮದುವೆಯಾಗು ವುದಿಲ್ಲವೆಂದು ಶಪಥ ಮಾಡಿದ್ದ ರತ್ನನ ಪ್ರಣಯ, ಕುಂಟನಾದರೂ ತನ್ನ ಸೋದರತ್ತೆ ಮಗನಾದ ರಾಮುವನ್ನು ಪ್ರೀತಿಸಿದ್ದ ಲಿನ್ನಿಗೆ ತನ್ನ ಮೆಚ್ಚಿನ ಕತೆಗಾರ ಕೌಸಲ್ಯಾನಂದನನೂ ಅವನೇ ಎಂದು ತಿಳಿಯುವ ಸತ್ಯ, ಮರದ ಗೊಂಬೆಯಲ್ಲಿ ವಿದ್ಯಾರ್ಥಿ ದೆಸೆಯಲ್ಲಿನ ಹುಡುಗಾಟಗಳು ಶೈಲಳ ಬದುಕಿನಲ್ಲಿ ತನ್ನ ಉಪಾಧ್ಯಾಯನನ್ನೇ ಮದುವೆಯಾಗುವಂತೆ ಮಾಡಿದ ಪ್ರಸಂಗವನ್ನು ಸ್ವಾರಸ್ಯಕರವಾಗಿ ಚಿತ್ರಿಸುತ್ತದೆ. 'ಆಹುತಿ'ಯೆಂಬ ಕಥೆ ತನ್ನ ರಚನಾ ವಿಧಾನದಿಂದ ವಿಶಿಷ್ಟವಾದ ಕತೆ. ತಾನು ಪ್ರೀತಿಸಿದ ಹುಡುಗಿಯನ್ನು ತನಗೇ ಮೊದಲೇ ತೋರಿಸಿದ್ದ ಹುಡುಗಿ ಎಂದು ಅರಿಯದೆ ವಿವಾಹವಾಗಲು ನಾಯಕ ನಿರ್ಧರಿಸುವಷ್ಟರಲ್ಲಿ ವರದಕ್ಷಿಣೆಯ ಕಾರಣದಿಂದಾಗಿ ಅವಳ ಆತ್ಮಹತ್ಯೆ ಸಂಭವಿಸುತ್ತದೆ. ತಾನು ಕೊಂದ ಹುಡುಗಿಯ ಚಿತ್ರ ಹಾಗೂ ಸುದ್ದಿ ಪತ್ರಿಕೆಯಲ್ಲಿ ಬಂದಿರುತ್ತದೆ. ಈ ಕತೆಗಳಲ್ಲಿ 'ಶಿಕ್ಷಣ, ಪತ್ರಿಕೆ'ಗಳು ಮೇಲ್ವರ್ಗದವರಿಗೆ ಲಭ್ಯವಾಗುತ್ತಿದ್ದು ಅದರ ಪ್ರಸ್ತಾಪ ಮೇಲಿಂದ ಮೇಲೆ ಗೌರಮ್ಮನವರ ಕತೆಗಳಲ್ಲಿ ಆಗುತ್ತಿರುತ್ತದೆ.

### ೨. ವಿದೇಶದ ಮೋಹಕ್ಕೆ ಸಿಕ್ಕಿಕೊಂಡು ತಮ್ಮ ಹೆಂಡತಿಯನ್ನು ಮರೆತಂತಹ ಗಂಡಂದಿರ ಕತೆಗಳು

ಗೌರಮ್ಮನವರ ಕಥಾ ಜಗತ್ತಿನಲ್ಲಿ ಗಂಡು ಹೆಣ್ಣಿನ ನಡುವೆ ಇರುವ ನವಿರಾದ ಪ್ರಣಯದಂತೆಯೇ ಚಿತ್ರಿಸಲ್ಪಟ್ಟಿರುವ ಇನ್ನೊಂದು ಪ್ರಧಾನ ಸಮಸ್ಯೆ ವರದಕ್ಷಿಣೆ ಹಾಗೂ ವಿದೇಶಗಳಿಗೆ ಹೋಗಲು ಕಾತರಿಸುವ ಗಂಡುಗಳು. ಗೌರಮ್ಮನವರು ಕತೆ ಬರೆಯುವ ಸಂದರ್ಭದಲ್ಲಿ ವಿದೇಶಕ್ಕೆ ಕಾತರಿಸುವ ಮಧ್ಯಮವರ್ಗದ ಗಂಡುಗಳು ಮದುವೆ ಮಾಡಿಕೊಂಡು ವರದಕ್ಷಿಣೆಯನ್ನು ಪಡೆದು ವಿದೇಶಕ್ಕೆ ಹೋದ ನಂತರ ಅಮಾನವೀಯವಾಗಿ ಕಟ್ಟಿಕೊಂಡವರನ್ನು ಮರೆಯುವ ಹಲವು ಚಿತ್ರಗಳು ಇಲ್ಲಿವೆ. ಗಮನಿಸಬೇಕಾದ ಸಂಗತಿಯೆಂದರೆ ನಮ್ಮ ಸಮಾಜದಲ್ಲಿನ ಪ್ರತಿಯೊಂದು ಸಮಸ್ಯೆಯ ಬಗ್ಗೆ ಚಿಂತಿಸುವ ಗೌರಮ್ಮನವರು ಬ್ರಿಟೀಷರು ನಮ್ಮ ದೇಶದಲ್ಲಿ ತಮ್ಮ ಆಳ್ವಿಕೆಯನ್ನು ಆರಂಭಿಸಿ ಅವರಿಂದ ಆದ ಪ್ರಭಾವ, ಬಿಕ್ಕಟ್ಟುಗಳು, ನಮ್ಮ ಜನಜೀವನದಲ್ಲಿ ಉಂಟುಮಾಡಿದ ತಲ್ಲಣಗಳ ಬಗ್ಗೆಯಾಗಲೀ ಹಾಗೂ ನಮ್ಮ ಸಮಾಜದ ಪಿಡುಗಾಗಿದ್ದ ಅಸ್ಪೃಶ್ಯತೆಯ ಬಗ್ಗೆಯಾಗಲೀ ಎಲ್ಲೂ ಪ್ರಸ್ತಾಪ ಮಾಡುವುದಿಲ್ಲ. ಬಹುಶಃ ಮೇಲುಮಧ್ಯಮ ವರ್ಗಕ್ಕೆ ಸೇರಿದ ಗೌರಮ್ಮನವರಿಗೆ ಇವು ಪ್ರಧಾನ ಸಮಸ್ಯೆಯಾಗಿರಲಾರದು. ಅಲ್ಲದೆ ಅವರ ಜೀವಿತದ ಅವಧಿಯು ಕಿರಿದಾಗಿರುವುದೂ ಸಹ ಇದಕ್ಕೆ ಕಾರಣವಿರಬಹುದು.

ಒಂದು ರೀತಿಯ ನಿರ್ವೇಗದ ಮಾಧ್ಯಮದಲ್ಲಿ ಬರೆಯುವ ಕತೆಗಳಲ್ಲಿ ಗಂಡು ಹೆಣ್ಣಿನಿಂದ ವಿದೇಶದ ವಿದ್ಯಾಭ್ಯಾಸದ ಹೆಸರಿನಲ್ಲಿ ದೂರವಾಗಲು ಪರಸ್ಪರ ಸಾಮರಸ್ಯದ ಅರಿವು ಇಲ್ಲದಿರುವುದು ಹಾಗೂ

ಹೆಣ್ಣಿನ ಅಶಿಕ್ಷಣವೇ ಕಾರಣವೆಂದು ಕತೆಗಾರ್ತಿ ಗುರ್ತಿಸುತ್ತಾರೆ. "ಸ್ತ್ರೀ ಪುರುಷರ ನಡುವೆ ಸಾಮರಸ್ಯದ ಅಗತ್ಯವನ್ನು ಗುರುತಿಸಬಯಸದ ಸಮಾಜ, ವಿದೇಶಿ ಶಿಕ್ಷಣದ ವ್ಯಾಮೋಹಕ್ಕಾಗಿ ನಡೆಯುವ ಒಂದು ವ್ಯಾಪಾರದಂತೆ ಮದುವೆಯನ್ನು ಪರಿಗಣಿಸುವುದರ ವಿಕೃತ ಫಲವೇ ಈ ಕತೆಗಳ ವಸ್ತು" * ಎಂದು ಈ ಸಮಸ್ಯೆಯ ಮೂಲವನ್ನು ಗುರ್ತಿಸಿದ್ದಾರೆ. ಯಾರು?, ಒಂದು ಚಿತ್ರ, ನನ್ನ ಮದುವೆ ಇಂತಹ ಸಮಸ್ಯೆಗಳನ್ನು ಚಿತ್ರಿಸುವ ಕಥೆಗಳಾಗಿವೆ.

'ಯಾರು' ಎಂಬ ಕಥೆ ಒಂದು ಹೆಣ್ಣಿನ ಕಾರಣಕ್ಕಾಗಿ ಸ್ನೇಹಿತರ ನಡುವೆ ವಿರಸವುಂಟಾಗಿ ಅದು ತಿಳಿಯಾಗುವ ಕಥೆ. ವಸಂತ ಮತ್ತು ಮಹೇಶ ಆತ್ಮೀಯ ಗೆಳೆಯರು. ಚರಿತ್ರಹೀನ ನಟಿಯೊಬ್ಬಳ ಜೊತೆ ಮಹೇಶನಿಗೆ ಸಂಪರ್ಕವಿದೆಯೆಂದು ಮಹೇಶನನ್ನು ವಸಂತ ತಿರಸ್ಕರಿಸುತ್ತಾನೆ. ಪತ್ರದ ಮೂಲಕ ತನ್ನ ತಿರಸ್ಕಾರ ಸೂಚಿಸಿದಾಗ ಪತ್ರದ ಮೂಲಕವೇ ಮಹೇಶನ ಉತ್ತರ ದೊರೆಯುತ್ತದೆ. ಆ ಸಿನಿಮಾ ನಟಿ ಬೇರೆ ಯಾರೂ ಅಗಿರದೆ ಮಹೇಶನ ತಂಗಿಯೇ ಆಗಿದ್ದು ಪತ್ರದ ಮೂಲಕವೇ ಅವಳ ಕತೆ ಬಿಚ್ಚಿಕೊಳ್ಳುತ್ತದೆ. ಹುಟ್ಟಿದಾಗಲೇ ತಾಯಿಯನ್ನು ಕಳೆದುಕೊಂಡ ತನ್ನ ತಂಗಿಯನ್ನು ಜತನದಿಂದ ನೋಡಿಕೊಳ್ಳುವ ಮಹೇಶ ತಂಗಿಯ ಮದುವೆಯ ದುರಂತವನ್ನು ಕಣ್ಣೆದುರೇ ನೋಡಬೇಕಾಗುತ್ತದೆ. ಅವನ ತಂಗಿ ಪಾಪನಿಗೆ ಹದಿನೈದು ವರ್ಷಕ್ಕೇ ಮದುವೆಯಾಗಿ ಅವಳ ಗಂಡ ಹೆಚ್ಚಿನ ವಿಧ್ಯಾಭ್ಯಾಸಕ್ಕೆಂದು ಇವರಿಂದ ನೆರವು ಪಡೆದು ಇಂಗ್ಲೆಂಡಿಗೆ ಹೊರಡುತ್ತಾನೆ. ಅದನ್ನು ತಡೆಯಲೆತ್ನಿಸದ ಪಾಪನಿಗೆ ಅವನು ಇಂಗ್ಲೆಂಡಿಗೆ ಹೋಗುವ ಸಲುವಾಗಿಯೇ ಮದುವೆಯಾದೆ ಎಂಬ ಜೀವಕೊಲ್ಲುವ ಮಾತನಾಡುತ್ತಾನೆ. ವಿದ್ಯಾಭ್ಯಾಸ ಮುಗಿಸಿ ಬಂದರೂ ಬೇರೆಯವಳನ್ನು ಮದುವೆಯಾಗಿ ಮುಗ್ಧಳಾದ ಪಾಪಳನ್ನು ದೂರತಳ್ಳುತ್ತಾನೆ. ಇದರಿಂದ ನೊಂದು ಮೂಲೆ ಸೇರಿದ ಪಾಪಳಿಗೆ ಅನಿವಾರ್ಯವಾಗಿ ಸಾರ್ವಜನಿಕ ಸಭೆಯೊಂದರಲ್ಲಿ ಭಾಗವಹಿಸುವ ಸಂದರ್ಭ ಒದಗಿ ಆ ಮೂಲಕ ಪ್ರಖ್ಯಾತ ನಟಿಯಾಗುತ್ತಾಳೆ. ತನ್ನ ಗಂಡನ ವಿದ್ಯಾಭ್ಯಾಸದಿಂದ ಅಣ್ಣನ ವಿದ್ಯಾಭ್ಯಾಸ ನಿಂತುಹೋದದ್ದನ್ನು ತಾನೇ ಸರಿಪಡಿಸಿ ಅವನು ಓದುವಂತೆ ಆರ್ಥಿಕ ಸಹಾಯ ಒದಗಿಸುತ್ತಾಳೆ. ಇದಿಷ್ಟು ಸ್ನೇಹಿತರಿಬ್ಬರ ಎರಡೂ ಪತ್ರಗಳಿಂದ ನಮಗೆ ತಿಳಿಯುವ ಕಥೆ. ವರದಕ್ಷಿಣೆ, ವಿಲಾಯತಿಯ ಹುಚ್ಚಿಗೆ ಸಿಕ್ಕಿಕೊಂಡು ಮಾನವೀಯತೆ ಮರೆತು ಪಾಶ್ಚಾತ್ಯ ಜೀವನಶೈಲಿಗೆ ಮರುಳಾದ ಯುವಜನಾಂಗದ ಮಾನಸಿಕ ವ್ಯಾಪಾರವನ್ನು ಈ ಕತೆ ಚಿತ್ರಿಸುತ್ತದೆ. ಪಾಪಳ ಛಲದ ಬದುಕು, ತನ್ನತನವನ್ನು ಹುಡುಕಿಕೊಳ್ಳುವ ಪ್ರಯತ್ನ ಗೌರಮ್ಮನವರು ಶೋಷಣೆಗೆ ಒಳಗಾದ ಸ್ತ್ರೀಯರಲ್ಲಿ ಮೂಡಿಸುವ ಜಾಗೃತಿಯ ಫಲವಾಗಿ ಕಂಡುಬರುತ್ತದೆ.

'ಒಂದು ಚಿತ್ರ' ಕತೆಯಲ್ಲಿ ರೋಹಿಣಿಯದು ವಿಭಿನ್ನವಾದ ಕತೆ. ನಿರೂಪಕಿಯೊಬ್ಬಳು ಕಂಡ ರೋಹಿಣಿಯ ಬದುಕಿನ ಚಿತ್ರವೆಂಬಂತೆ ಕತೆ ನಿರೂಪಿತವಾಗಿದೆ. ಮಗನ ಹಾಗೆ ರೋಹಿಣಿಯನ್ನೂ ತನ್ನ ಮಗಳೇ ಎಂದು ಭಾವಿಸಿಕೊಂಡಿದ್ದ ನಿರೂಪಕಿಯ ಎದುರೇ ರೋಹಿಣಿಯ ಮದುವೆಯಾಗುತ್ತದೆ. ಹಣವಂತರ ಒಬ್ಬನೇ ಮಗ ಯುರೋಪಿಯನ್ ತರುಣಿಯರ ಬಲೆಗೆ ಬೀಳಬಾರದೆಂಬ ತವಕದಿಂದ ಸುಂದರಿಯಾದ ರೋಹಿಣಿಯೊಡನೆ ಮದುವೆ ಮಾಡಿದರೂ ಆ ಹುಡುಗ ರೋಹಿಣಿಯ ಬಗ್ಗೆ ಯಾವ ಆಸಕ್ತಿ ತೋರದೆ ವಿದೇಶಕ್ಕೆ ಹೊರಟು ಹೋಗುತ್ತಾನೆ. ಇದರಿಂದ ಉದಾಸೀನಳಾದ ರೋಹಿಣಿ ಗಂಡನ ಬಗ್ಗೆ ಆಸಕ್ತಿ ಕಳೆದುಕೊಳ್ಳುತ್ತಾಳೆ. ನಿರೂಪಕಿಯ ಮಗ ಜರ್ಮನಿಯಿಂದ ಹಿಂದಿರುಗುವಾಗ ತನ್ನೊಂದಿಗೆ

---

* ಡಾ. ಬಿ.ಎಸ್. ಸುಮಿತ್ರಾಬಾಯಿ : ವಿಚಯ, ಕೊಡಗಿನ ಗೌರಮ್ಮನವರ ಮಾಸದ ಹೆಜ್ಜೆ ಗುರುತು, ಇಳಾ ಪ್ರಕಾಶನ, ೧೯೯೫, ಪು.ಸಂ. ೧೦೦.

ಕರೆತಂದ ಸ್ನೇಹಿತ ಚಂದರ್‌ನನ್ನು ರೋಹಿಣಿಗೆ ಪರಿಚಯಿಸುತ್ತಾನೆ. ಪರಿಚಯ ಸ್ನೇಹವಾಗಿ, ಸ್ನೇಹದಿಂದ ಪ್ರಣಯಕ್ಕೆ ತಿರುಗುತ್ತದೆ. ಕಥೆಯ ಕೊನೆಯ ಭಾಗದಲ್ಲಿ ಪ್ರಣಯಿಗಳು ಈ ಹಿಂದೆ ಮದುವೆಯಾಗಿದ್ದ, ಪರಸ್ಪರ ತಮ್ಮ ಬಗ್ಗೆ ಉದಾಸೀನತೆಯಿಂದಿದ್ದ ಗಂಡಹೆಂಡಿರಾಗಿದ್ದರೆಂಬ ಸತ್ಯ ಸ್ಫೋಟವಾಗುತ್ತದೆ. ಈ ರೀತಿಯ ತಂತ್ರದಿಂದಾಗಿ ಕತೆ ವಿಶಿಷ್ಟತೆ ಉಳಿಸಿಕೊಳ್ಳುತ್ತದೆ. ವಿವಾಹ ಪೂರ್ವದಲ್ಲಿ ಹಿರಿಯರಾಗಲೀ, ಕಿರಿಯರಾಗಲೀ ಮದುವೆಯನ್ನು ಕೇವಲ ವಿಧಿಯೆಂಬಂತೆ, ವ್ಯವಹಾರವೆಂಬಂತೆ ಪರಿಗಣಿಸುವುದೇ ಇಂತಹ ಎಲ್ಲ ವೈರುಧ್ಯಗಳಿಗೆ ಕಾರಣವೆಂಬುದು ಗೌರಮ್ಮನವರ ಕತೆಗಳಲ್ಲಿ ಅರಿವಿಗೆ ಬರುವ ಸಂಗತಿಯಾಗಿದೆ.

'ನನ್ನ ಮದುವೆ' ಎಂಬ ಕತೆಯಲ್ಲಿ ಚಿಕ್ಕಂದಿನಿಂದಲೇ ವಿದೇಶಕ್ಕೆ ಹೋಗಿ ವಿದ್ಯಾಭ್ಯಾಸ ಮತ್ತಿತರ ಸೌಲಭ್ಯ ಪಡೆಯಬೇಕು ಎಂಬ ಕನಸನ್ನು ಕಂಡ ಯುವಕ ತಮ್ಮ ಕೌಟುಂಬಿಕ ಪರಿಸ್ಥಿತಿಯಲ್ಲಿ ಅಂತಹ ಅವಕಾಶ ಸಾಧ್ಯವಿಲ್ಲದೆ ಖಿನ್ನನಾಗುತ್ತಾನೆ. ಚಿಕ್ಕಂದಿನಿಂದಲೇ ಅವನ ಕನಸು ಹೆಮ್ಮರವಾಗಿ ಬೆಳೆದಿರುತ್ತದೆ. "ನಾನು ಚಿಕ್ಕವನಾಗಿದ್ದಾಗ ನಮ್ಮನೆಯ ಪಕ್ಕದ ಮನೆಯವರ ಮಗನು ಇಂಗ್ಲೆಂಡಿಗೆ ಯಾವುದೋ ಒಂದು ಪರೀಕ್ಷೆಗಾಗಿ ಹೋಗಿದ್ದವನು, ಯುರೋಪು ಪ್ರವಾಸವನ್ನು ಮಾಡಿಕೊಂಡು ಮನೆಗೆ ಹಿಂತಿರುಗಿದ. ಆಗ ಊರಿನವರು ಅವನಿಗೆ ಮಾಡಿದ ಮರ್ಯಾದೆ, ಆತನ ಕಾರು, ಹೊಸ ನಮೂನೆಯ ವಸ್ತ್ರಭೂಷಣಗಳು, ಆತ ನಡೆಯುವ ಬೆಡಗು, ಮಾತಾಡುವ ಮಟ್ಟು ಎಲ್ಲಾ ನೋಡಿ ನನಗೂ ಆಸೆಯಾಯಿತು ಇಂಗ್ಲೆಂಡಿಗೆ ಹೋಗಿ ಆತನಂತಾಗಿ ಬರಬೇಕೆಂದು" (ನನ್ನ ಮದುವೆ). ಇಂತಹ ಕನಸುಗಳಿಂದಲೇ ಬೆಳೆದ ನಾಯಕ ವಿದೇಶದ ಖರ್ಚಿಗೆಂದು ಮದುವೆಗೆ ಒಪ್ಪಿಕೊಳ್ಳುತ್ತಾನೆ. ಅಲ್ಲಲ್ಲಿ ವರದಕ್ಷಿಣೆಗಾಗಿ ತನ್ನನ್ನು ಮಾರಿಕೊಂಡೆ ಎಂಬ ಪಾಪಪ್ರಜ್ಞೆ ಕಾಡಿದರೂ ಮದುವೆ ನಡೆಯುತ್ತದೆ. ಅಂತ್ಯದಲ್ಲಿ ಈತನನ್ನು ಕೈ ಹಿಡಿದಾಕೆ, ಆ ಮದುವೆಯ ಹೆಣ್ಣು ಹುಟ್ಟುಕುರುಡಿಯೆಂಬ ಸತ್ಯ ಸ್ಫೋಟವಾಗುತ್ತದೆ.

ಹೀಗೆ ಮಹತ್ವಾಕಾಂಕ್ಷೆಗೆ ಸಿಲುಕಿದ ಗಂಡುಗಳು, ಗಂಡಿನ ಮಹತ್ವಾಕಾಂಕ್ಷೆಯ ಎದುರು ಸೊರಗಿಹೋದ ಹೆಣ್ಣುಗಳ ಚಿತ್ರಣ ಗೌರಮ್ಮನವರ ಹಲವಾರು ಕತೆಗಳಲ್ಲಿ ದೊರೆಯುತ್ತದೆ. ಒಳಗೊಳಗೇ ಅಂತರಂಗದ ವಿಮರ್ಶೆಗೆ ತೊಡಗಿದ ಗಂಡುಗಳಿದ್ದಂತೆಯೇ, ಜಡವಾದ ಸ್ವಾರ್ಥಿ ಗಂಡುಗಳೂ ಈ ಲೋಕದಲ್ಲಿದ್ದಾರೆ. ಹೀಗೆ ಹೆಣ್ಣುಗಂಡುಗಳ ನಡುವೆ ಸೃಷ್ಟಿಯಾಗುವ ಸಂದರ್ಭದಲ್ಲಿನ 'ಕಪ್ಪು ಮತ್ತು ಬಿಳುಪು' ಪಾತ್ರಗಳಲ್ಲಿ ಗಂಡಿನ ಚಿತ್ರಣವನ್ನು ಗೌರಮ್ಮನವರು ಸಹಜ ಭಾಷೆಯಲ್ಲಿ ಚಿತ್ರಿಸಿದ್ದಾರೆ.

### ೩. ವಿಧವಾ ಸಮಸ್ಯೆಯನ್ನು ಕೇಂದ್ರವಾಗಿರಿಸಿಕೊಂಡ ಕತೆಗಳು.

ಸಾಂಪ್ರದಾಯಿಕ ಚೌಕಟ್ಟಿನೊಳಗೆ ಬದುಕುವ ಗಂಡು ಹೆಣ್ಣುಗಳ ಹರೆಯದ ಜೀವನವನ್ನು ಚಿತ್ರಿಸುವಾಗ ಅದುಮಿಟ್ಟ ಹೆಣ್ಣುಗಳ ಬದುಕು ತನ್ನ ಮಿತಿಯೊಳಗೇ ಸಾಧಾರಣವಾಗಿ ಗೌರಮ್ಮನವರ ಕತೆಗಳಲ್ಲಿ ವ್ಯಕ್ತವಾಗುತ್ತಿರುತ್ತದೆ. ಇಲ್ಲಿನ ಹೆಣ್ಣುಗಳು ಸಾಂಪ್ರದಾಯಿಕ ಮಿತಿಯೊಳಗೇ ಬದುಕುತ್ತಿದ್ದರೂ ಆರೋಗ್ಯಕರವಾದ ಆಲೋಚನೆ, ಜೀವಪರವಾದ ನಿಲುವುಗಳನ್ನು ಉಳ್ಳವರಾಗಿದ್ದಾರೆ. ವಿದ್ಯೆ, ಓದು, ಅವಕಾಶಗಳ ಹಿನ್ನೆಲೆಯಲ್ಲಿ ಮಾನವೀಯತೆ ಮರೆತ ಗಂಡುಗಳಿರುವಂತೆಯೇ, ಸಾಮಾಜಿಕ ಅನ್ಯಾಯದಿಂದ ಸಿಡಿಯುವ ಪುನರ್ವಿವಾಹದ ರಾಜಿ. ನಾಗೇಶರಾಯನಿಂದ ಅತ್ಯಾಚಾರಕ್ಕೆ ಒಳಗಾಗಿ ಆತ್ಮಹತ್ಯೆ ಮಾಡಿಕೊಳ್ಳಲು ಹೊರಟಿದ್ದ ವಿಧವೆ ಪಾರ್ವತಿಯನ್ನು ಮತಾಂತರದಿಂದ ರಕ್ಷಿಸಿದ್ದ ಉನ್ನಿಸಾ. ಯೌವನದ ಸಹಜ ಆಕರ್ಷಣೆಗಳಿಂದ ಇನ್ನೊಬ್ಬರ ಬಾಳಿಗೆ ಮುಳ್ಳಾಗಬಯಸದ ಇಂದು. – ಈ ರೀತಿಯ ಸ್ವತಂತ್ರ ಆಲೋಚನೆಯಿರುವ ಸನಾತನ ಸಂಪ್ರದಾಯದ ಒಳಗೇ ಅರಳಿರುವ ಹಲವು ಹೆಣ್ಣುಗಳ ಚಿತ್ರಣ ಕಂಡುಬರುತ್ತದೆ. ರೋಷ, ಆವೇಶಗಳಿಲ್ಲದೆ ವಾಸ್ತವ ಸ್ಥಿತಿಯನ್ನು ವಿಶ್ಲೇಷಿಸುವ ಗೌರಮ್ಮನವರು ಜೀವ

ಪರವಾದ ನಿಲುವುಗಳನ್ನು ಎಂತಹದೇ ಸಂದರ್ಭದಲ್ಲಿ ಎತ್ತಿ ಹಿಡಿಯುವುದು ಮುಖ್ಯವಾದ ಅಂಶವೆನಿಸುತ್ತದೆ. ಇದೇ ಸಂದರ್ಭದಲ್ಲಿ ಬರೆಯುತ್ತಿದ್ದ ನವೋದಯ ಸಂದರ್ಭದ ಮುಖ್ಯ ಕತೆಗಾರರಲ್ಲಿ 'ವಿಧವೆ, ಬಾಲ್ಯವಿವಾಹ, ಧರ್ಮದ ಸಮಸ್ಯೆಗಳು' ಪಲಾಯನವಾದವೆಂಬಂತೆ ಚಿತ್ರಿತವಾಗುತ್ತಿದ್ದ ಸಂದರ್ಭದಲ್ಲಿ ತಮ್ಮ ಮಿತಿಯೊಳಗೆ ತಾವು ಸೃಷ್ಟಿಸಿದ ಪಾತ್ರಗಳಿಗೆ ನ್ಯಾಯ ಒದಗಿಸಲು ಪ್ರಯತ್ನಿಸಿದ ಗೌರಮ್ಮನವರ ಕತೆಗಳು ನಿಜವಾಗಿಯೂ ಸ್ತುತ್ಯಾರ್ಹವಾಗಿವೆ.

'ವಿಧವಾ ಸಮಸ್ಯೆ'ಯನ್ನು ಕುರಿತಾದ ಹಲವು ಕತೆಗಳು ವಿಧವೆಯರ ಬಗೆಗಿನ ಗೌರಮ್ಮನವರ ಹಲವು ನಿಲುವುಗಳನ್ನು ಎತ್ತಿ ಹಿಡಿಯುತ್ತವೆ. ಮೇಲ್ವರ್ಗಕ್ಕೆ ಸೇರಿದ ಬ್ರಾಹ್ಮಣ ಕುಟುಂಬದ ವಿಧವೆಯರ ನಿರ್ಜೀವ ಬದುಕು, ಸನಾತನ ಧರ್ಮದ ಮಿತಿಯೊಳಗೇ ಅವರು ಹಲ್ಲೆಗೀಡಾಗುವ ಪ್ರಸಂಗಗಳನ್ನು ಚಿತ್ರಿಸಿದ್ದಾರೆ. "ವಾಣಿಯ ಸಮಸ್ಯೆ"ಯ ಇಂದು ಇಂತಹ ಸನಾತನ ಕುಟುಂಬದ ಹೆಣ್ಣು. ಚಿಕ್ಕವಯಸ್ಸಿನಲ್ಲೇ ಗಂಡನನ್ನು ಕಳೆದುಕೊಂಡು ಗಂಡ ಮಾಡಿಟ್ಟ ಆಸ್ತಿಯಲ್ಲಿ ಇಹಲೋಕದ ವ್ಯವಹಾರಗಳ ಬಗ್ಗೆ ತಲೆಕೆಡಿಸಿಕೊಳ್ಳದೆ ತನ್ನ ಪಾಡಿಗೆ ತಾನು ಕ್ರಮಬದ್ಧ ಜೀವನ ನಡೆಸುತ್ತಿದ್ದವಳು. ಅವಳ ಬದುಕಿನಲ್ಲಿ ಪಕ್ಕದ ಮನೆಯವರಾಗಿ ಬಂದ ಡಾಕ್ಟರ್ ರತ್ನ, ಅವನ ಹೆಂಡತಿ ವಾಣಿ ಕೆಲಕಾಲ ಅವಳ ಏಕಾಂತವನ್ನು ಹೋಗಲಾಡಿಸಿದರೂ ಡಾಕ್ಟರ್ ರತ್ನನ ವರ್ತನೆ ಅವಳಿಗೆ ಸಮಸ್ಯೆಯನ್ನುಂಟುಮಾಡುತ್ತದೆ. ಹೆಂಡತಿಯ ಅಶಿಸ್ತಿನ ಜೀವನ, ಇಂದುವಿನ ಶಿಸ್ತಿನ ಜೀವನ ಡಾಕ್ಟರ್ ರತ್ನ ಇಂದುವಿನ ಕಡೆಗೆ ಆಕರ್ಷಿಸುವಂತೆ ಮಾಡುತ್ತದೆ. ತನ್ನ ಬಯಕೆ ಆಕಾಂಕ್ಷೆಗಳನ್ನು ಹತ್ತಿಕ್ಕಲಾರದ ಇಂದು ತನ್ನನ್ನು ಸಾಕಿದವರ ಬಳಿಗೆ ಮರಳಿ ಹೋಗುವುದರ ಮೂಲಕ ದಾರಿ ಕಂಡುಕೊಳ್ಳುತ್ತಾಳೆ. ಕತೆಯ ವಿಶಿಷ್ಟತೆ ಇರುವುದು ಕಪ್ಪು-ಬಿಳಿಪಿನ ಪಾತ್ರ ಚಿತ್ರಿಸುವುದರಲ್ಲಿ ಅಲ್ಲ, ಜೀವನದ ಸಹಜ ಓಟವನ್ನು ಚಿತ್ರಿಸುವುದರಲ್ಲಿ ಎಂಬುದು ಮುಖ್ಯವಾಗಿರುತ್ತದೆ.

"ಪುನರ್ ವಿವಾಹ" ಎಂಬ ಕತೆ ಉಳಿದೆಲ್ಲಾ ಕತೆಗಳಿಗಿಂತ ಭಿನ್ನವಾಗಿ ಸಮಸ್ಯೆಯ ಮೂಲವನ್ನು ಕೆದಕಿ ಅದರ ಮೂಲೋತ್ಪಾಟನೆಯ ಬಯಕೆಯನ್ನು ಚಿತ್ರಿಸುವ ಕತೆಯಾಗಿದೆ. ವಿಧುರರಿಗೆ ಪುನರ್ವಿವಾಹ ಮಾಡಿಕೊಳ್ಳಲು ಅವಕಾಶ ಕೊಟ್ಟು, ವಿಧವೆಯರಿಗೆ ಬದುಕುವ ಅವಕಾಶವೇ ಕೊಡದ ಸನಾತನ ಧರ್ಮದ ಮೇಲೆ, ಪುರುಷ ನಿರ್ಮಿತ ಮೌಲ್ಯ ವ್ಯವಸ್ಥೆಯ ಮೇಲೆ ಗೌರಮ್ಮನವರು ರಾಜಿ ಎಂಬ ಬಾಲವಿಧವೆಯ ಪಾತ್ರದ ಮೂಲಕ ದಾಳಿ ನಡೆಸುತ್ತಾರೆ. ಹೆಂಡತಿ ಸತ್ತ ಆರು ತಿಂಗಳಿಗೇ ರಾಜಿಯೆನ್ನುವ ಹದಿನೈದು ವರ್ಷದ ಹುಡುಗಿಯನ್ನು ಮದುವೆಯಾಗಲು ಹೊರಟ ನಾಯಕ ಮೂವತ್ತೈದು ವರ್ಷದವನು. ಹದಿನೈದು ವರ್ಷಗಳ ಕಾಲದ ದಾಂಪತ್ಯ ಜೀವನವನ್ನು ಮರೆತು ಹದಿನೈದು ವರ್ಷಗಳ ಹುಡುಗಿಗಾಗಿ ಕನಸು ಕಾಣುತ್ತಾನೆ. ಮದುವೆಗಿಂತ ಮುಂಚೆ ನಾಯಕನೊಂದಿಗೆ ಮಾತನಾಡಲು ಬಯಸಿದ ರಾಜಿ ತಾನು ಬಾಲ ವಿಧವೆಯೆಂಬ ಸತ್ಯ ಸ್ಫೋಟಿಸುತ್ತಾಳೆ. ವಿಧವೆಯೆಂದ ತಕ್ಷಣ ವಿಧುರನಾದ ನಾಯಕ ಅವಳನ್ನು ನೋಡುವುದೇ ಅವಲಕ್ಷಣವೆಂಬಂತೆ ಮಾತನಾಡುತ್ತಾನೆ. ಅವನೊಂದಿಗೆ ವಿವಾಹ ನಿರಾಕರಿಸಿದ ರಾಜಿ ವೇದ, ಶಾಸ್ತ್ರ, ಪುರಾಣ, ಮನುಧರ್ಮ ಸಂಹಿತೆಯಲ್ಲಿ ವಿಧವೆಯರ ಪರವಾಗಿರುವ ಅಂಶಗಳನ್ನು ಅವನಿಗೆ ಅರ್ಥಮಾಡಿಸುತ್ತಾ ಆರು ತಿಂಗಳಿಗೇ ಹೆಂಡತಿಯನ್ನು ಮರೆತು ಮರು ವಿವಾಹವಾಗಲು ಹೊರಟ ಅವನ ನಿಷ್ಠೆಯನ್ನು ಪ್ರಶ್ನಿಸುತ್ತಾಳೆ.

ಇಪ್ಪತ್ತೆಂಟರ ಹರೆಯದಲ್ಲೇ ಇಂತಹ ಹಲವಾರು ಸಮಸ್ಯೆಗಳನ್ನು ಪ್ರಶ್ನಿಸಬಲ್ಲ, ಸಮಾಜದ ವಿವಿಧ ವ್ಯಕ್ತಿತ್ವಗಳ ಪಾತಳಿಗಳನ್ನು ಹೊಕ್ಕು ನೋಡಬಲ್ಲ ಗೌರಮ್ಮನವರ ಈ ಪ್ರಯತ್ನಗಳು ಲೇಖಕಿಯೊಬ್ಬರ ಕತೆಗಳು ಎಂದು ಸಾಧಾರಣೀಕರಿಸಿ ಪಕ್ಕಕ್ಕಿಡುವ ಪ್ರಯತ್ನಗಳಾಗಿರಲಿಲ್ಲ. ಲಿಂಗಭೇದವಿಲ್ಲದಿರುವುದೇ ಬರೆದ ರಚನೆಗಳಿವೆಂದು ಗುರುತಿಸಲ್ಪಡುವ ಪ್ರತಿಭೆ ಗೌರಮ್ಮನವರದಾಗಿದ್ದಿತು.

ಅಪರಾಧಿ ಯಾರು? ಕತೆಯಲ್ಲಿ ವಿಧವೆ ಪಾರ್ವತಿ ಜೀವನ ನಿರ್ವಹಣೆಗಾಗಿ ನಾಗೇಶರಾಯನ ಮನೆಯಲ್ಲಿ ಕೆಲಸಕ್ಕೆ ನಿಂತು ಅವನಿಂದ ಅತ್ಯಾಚಾರಕ್ಕೆ ಒಳಗಾದವಳು. ಮನೆಯಿಂದ ಹೊರದೂಡಲ್ಪಟ್ಟ ಅವಳು ಆತ್ಮಹತ್ಯೆಗೆಂದು ಹೊರಟಾಗ ಯಾರೂ ರಕ್ಷಿಸಲು ಬಾರದೆ ಸ್ನೇಹಿತೆ ಉನ್ನಿಸಾ ಅವಳಿಗೆ ರಕ್ಷಣೆ ಕೊಡುತ್ತಾಳೆ. ರಜಿಯಾ ಎಂಬ ಹೆಸರಿನಿಂದ ತನ್ನ ಹಾಗೂ ತನ್ನ ಮಗುವಿಗಾಗಿ ಪಾರ್ವತಿ ಮತಾಂತರ ಹೊಂದುತ್ತಾಳೆ. ಈ ಘಟನೆಯ ವಿವರಗಳು ಮತಾಂತರ ಹಾಗೂ ಬಹಿಷ್ಕಾರದಂತಹ ಧರ್ಮ ಸೂಕ್ಷ್ಮದ ವಿವರಗಳನ್ನು ಸಹಜ ಹಾಗೂ ಅನಿವಾರ್ಯವೆಂಬಂತೆ ಚಿತ್ರಿಸುತ್ತವೆ. ಮೂರು ಪತ್ರಗಳು ಹಾಗೂ ಪತ್ರಿಕೆಯಲ್ಲಿ ಬಂದ ಒಂದು ಸುದ್ದಿಯ ಮುಖಾಂತರ ಕತೆ ನಿರ್ವಹಿಸಲ್ಪಡುತ್ತದೆ. ಮೂರೂ ಪತ್ರಗಳು ಪಾರ್ವತಿಯ ಬಗ್ಗೆ ಭಿನ್ನ, ಭಿನ್ನ ದೃಷ್ಟಿಕೋನಗಳನ್ನು ಕೊಡುತ್ತಲೇ ಮತಾಂತರ ಸೂಕ್ತವೆಂಬ ಜೀವಪರ ನಿಲುವನ್ನು ಎತ್ತಿಹಿಡಿಯುತ್ತಾ ಸನಾತನಿಗಳ ಬಹಿಷ್ಕಾರದ ಪತ್ರಿಕಾ ವರದಿಯನ್ನು ತಣ್ಣಗೆ ಕತೆಯ ಅಂತ್ಯದ ಭಾಗದಲ್ಲಿ ಗೌರಮ್ಮನವರು ಜೋಡಿಸುತ್ತಾರೆ. ತಂತ್ರದ ದೃಷ್ಟಿಯಿಂದ, ಸಮಾಜದ ಸ್ಥಾಪಿತ ಮೌಲ್ಯವನ್ನು ವಿಶ್ಲೇಷಿಸುವ ಮೂಲಕ ಗೌರಮ್ಮನವರು ತಮ್ಮ ಕತೆಗಳಿಗೆ ಹೊಸದೊಂದು ಆಯಾಮ ಹುಡುಕಿಕೊಂಡಿದ್ದಾರೆ. ಗೌರಮ್ಮನವರು ದರ್ಶಿಸಿದ್ದ ಗಾಂಧಿ ಹಾಗೂ ಗಾಂಧಿಯ ವಿಚಾರಗಳು ಅವರ ಮೇಲೆ ಉಂಟು ಮಾಡಿದ್ದ ಪ್ರಭಾವಗಳು ಇಂತಹ ಹಲವಾರು ಕತೆಗಳಲ್ಲಿ ಎದ್ದು ಕಾಣುತ್ತವೆ.

ಮೇಲೆ ವಿಶ್ಲೇಷಿಸಿರುವ ಕತೆಗಳೇ ಅಲ್ಲದೆ, ಮರದ ಬೊಂಬೆ, ಅದೃಷ್ಟದ ಆಟ, ಸುಳ್ಳುಸ್ವಪ್ನ, ಸುಳ್ಳು ಸನ್ಯಾಸಿಯಂತಹ ಆಕರ್ಷಕ ಕತೆಗಳೂ ಇಲ್ಲಿವೆ. ಸಮಕಾಲೀನ ಕಥಾ ಸಾಹಿತ್ಯ, ಸಮಕಾಲೀನ ಸಂವೇದನೆಗಳು, ಸ್ತ್ರೀವಾದ, ತಂತ್ರ, ಕುಸುರಿಕೆಲಸ, ಜಾಗತೀಕರಣದಂತಹ ಸವಾಲುಗಳ ನಡುವೆ ತನ್ನ ಸ್ವರೂಪವನ್ನು ದಿನದಿಂದ ದಿನಕ್ಕೆ ಬದಲಿಸುತ್ತಲೇ ಇದ್ದರೂ ಅದರ ಮೂಲ ನೆಲೆ ಇರುವುದು ಮಾನವೀಯ ಸೆಲೆಗಳನ್ನು ಗುರುತಿಸುವುದರಲ್ಲಿ. ಗೌರಮ್ಮನವರ ಕತೆಗಳು ಭಾರತೀಯರು ಬ್ರಿಟೀಷರ ಸಂಪರ್ಕದಲ್ಲಿ ಇದ್ದ ದಿನಗಳಲ್ಲಿ ಬರೆದಂತಹವಾಗಿದ್ದು ಅನ್ಯ ಸಂಸ್ಕೃತಿಯೊಂದು ನಮ್ಮ ಸಂಸ್ಕೃತಿಯ ಮೇಲೆ, ಜೀವನ ವಿಧಾನದ ಮೇಲೆ, ಮಾನವೀಯ ಮೌಲ್ಯಗಳ ಮೇಲೆ ನಡೆಸಿದ ದಾಳಿ ಹಾಗೂ ನಡೆದ ಸ್ಥಿತ್ಯಂತರಗಳನ್ನು ದಾಖಲಿಸುವ ಕೆಲಸವನ್ನು ಯಶಸ್ವಿಯಾಗಿ ಮಾಡುತ್ತವೆ. ಒಂದು ಕಡೆ ಗಾಂಧಿಯವರ ವಿಚಾರಗಳು ಮತ್ತೊಂದೆಡೆಗೆ ಅನ್ಯ ಸಂಸ್ಕೃತಿ ಉಂಟುಮಾಡಿದ ಪಲ್ಲಟಗಳೆರಡರ ಚಿತ್ರಣವನ್ನು ಗೌರಮ್ಮನವರು ಪ್ರಜ್ಞಾಪೂರ್ವಕವಾಗಿಯೇ ತಮ್ಮ ಕತೆಗಳ ಮೂಲಕ ಕೊಟ್ಟಿದ್ದಾರೆ. ಗೌರಮ್ಮನವರು ಇಂತಹ ವಿಶಿಷ್ಟ ಸಂದರ್ಭದಲ್ಲಿ ನಿಂತು ಸನಾತನ ಧರ್ಮದ ಒತ್ತಡಗಳಿಂದ ಆಚೆಯೇ ಇರುವ ಹಲವು ಹತ್ತು ಸ್ತ್ರೀಸಮುದಾಯದ ಸಮಸ್ಯೆ, ಅಂತರಂಗದ ತೊಳಲಾಟಗಳನ್ನು ದಾಖಲಿಸಿದ್ದಾರೆ. ಕೇವಲ ಹೆಂಗರುಳನ್ನು ಚಿತ್ರಿಸುವ, ರಂಜಕತೆಯ ದಾಟಿಯ ಸೀಮಿತ ಉದ್ದೇಶದ ಕತೆಗಳಾಗದೆ ಬದಲಾಗುತ್ತಿರುವ ಸಮಾಜವೊಂದರ ಚಿತ್ರಣಗಳೂ ಇವಾಗಿವೆ ಎಂದು ಗುರುತಿಸಬಹುದಾಗಿದೆ.

ಗೌರಮ್ಮನವರ ಕತೆಗಳು ಕಲ್ಯಾಣಮ್ಮ, ಸರಸ್ವತಿಬಾಯಿ ರಾಜವಾಡೆ, ಎಚ್.ವಿ. ಸಾವಿತ್ರಮ್ಮ ಅವರ ಕಾಲದಲ್ಲಿ ಬಂದ ಕತೆಗಳೆಂದು, ಮಹಿಳಾ ಸಮಸ್ಯೆಗಳನ್ನು ವಿಶ್ಲೇಷಿಸಿದ ಕತೆಗಳೆಂದು ಗುರ್ತಿಸಲ್ಪಟ್ಟಿವೆ. ದೇವರು, ಧರ್ಮ, ಪರಂಪರೆಗಳೆಂಬ ವಿಚಾರಗಳಿಂದ ದೂರವೇ ನಿಂತು ಸ್ವಂತ ಛಾಪನ್ನು ರೂಪಿಸಿದ ಗೌರಮ್ಮನವರ ಕತೆಗಳು ನವೋದಯದ ಸಂದರ್ಭದ ಲೇಖಕರ ಜೊತೆ ಮೊದಲ ಸಾಲಿನಲ್ಲಿ ನಿಲ್ಲಬಲ್ಲ ಕತೆಗಳಾಗಿವೆ. ಕೇವಲ ಇಪ್ಪತ್ತೆಂಟು ವರ್ಷಗಳ ಬದುಕನ್ನು ಸವೆಸಿದ್ದ, ಅತ್ಯಲ್ಪ ಕಾಲದಲ್ಲಿ ರಚಿತವಾದ ಇಪ್ಪತ್ತೊಂದು ಕತೆಗಳು ಮುಂದೆ ಹಿರಿಯ ಲೇಖಕಿಯಾಗಿ ಬೆಳೆಯ ಮಾರ್ಗವನ್ನು ನಿರ್ಮಿಸಬಹುದಾಗಿದ್ದ ಗೌರಮ್ಮನವರ ಪ್ರತಿಭೆಗೆ ಸಾಕ್ಷಿಯಾಗಿ ನಿಂತಿವೆ ಎಂಬುದನ್ನು ನಾವು ಮರೆಯುವಂತಿಲ್ಲ.

# ಮಹಾತ್ಮ ಜೋತಿಬಾ ಫೂಲೆ

**- ಪ್ರೊ. ಜಿ.ಕೆ. ಗೋವಿಂದ ರಾವ್**

ಫೂಲೆ ಹಿಂದುಳಿದ ವರ್ಗಕ್ಕೆ ಸೇರಿದ ಒಬ್ಬ ಸಿರಿವಂತರಾಗಿದ್ದರು. ಹೂವು ಕಟ್ಟಿ, ವ್ಯಾಪಾರ ಮಾಡುತ್ತಿದ್ದುದರಿಂದ ಕಾಲಕ್ರಮೇಣ ಫೂಲೆ ಎಂಬ ಹೆಸರು ಮನೆತನಕ್ಕೆ ಅಂಟಿಕೊಂಡಿತು. ಫೂಲೆ ತಂದೆ ಅವರಿಗೆ ಎರಡನೆಯ ಮಗನಾದ ಜೋತಿಬಾ ಅವರನ್ನು ಹೆಚ್ಚಿಗೆ ಶಿಕ್ಷಣಕ್ಕೆ ಕಳಿಸುವುದರ ವಿರುದ್ಧ ಉಚ್ಚವರ್ಗದ ಜನ ಎಚ್ಚರಿಕೆ ಹಾಗೂ ಬುದ್ಧಿವಾದ ಹೇಳಿದರು; ಇಂಥಹ ಶಿಕ್ಷಣ ಅಪಾಯಕಾರಿ ಎಂದರು. ಹುಡುಗ ದೊಡ್ಡವನಾಗುತ್ತ 'ಬಂಡಾಯಗಾರನಾಗಿಬಿಡುತ್ತಾನೆ', 'ಅವಿಧೇಯನಾಗಿಬಿಡುತ್ತಾನೆ' ಎಂದು ಹೆದರಿಸಿದರು. ಬ್ರಾಹ್ಮಣೇತರ ಮಕ್ಕಳನ್ನು ಶಾಲೆಗಳಿಂದ ದೂರವಿಡುವ ಹುನ್ನಾರವೇ ನಡೆಯುತ್ತಿದ್ದ ಕಾಲ ಅದು. ಜೋತಿಬಾ ತಂದೆ 'ಊರ ಹಿರಿಯರ' ಮಾತುಗಳಿಗೆ ಶರಣಾಗಿ ಒಂದಷ್ಟು ಕಲಿತಿದ್ದ ಮಗನನ್ನು ಶಾಲೆಯಿಂದ ಬಿಡಿಸಿಬಿಟ್ಟರು. ಮಗ ಸನಿಕೆ, ಪಿಕಾಸಿಗಳನ್ನು ಹಿಡಿದು ತೋಟದಲ್ಲಿ ದುಡಿಯಲು ಆರಂಭಿಸಿದ.

ಸಂಪ್ರದಾಯದಂತೆ ಹುಡುಗ ಹದಿಮೂರು ವರ್ಷದವನಿದ್ದಾಗಲೆ ಎಂಟು ವರ್ಷದ ಸಾವಿತ್ರಿಬಾಯಿ ಎಂಬ ಬಾಲೆಯೊಡನೆ ವಿವಾಹವಾಯಿತು.

ಎಲ್ಲ ಮಕ್ಕಳಂತೆ ಬೆಳೆಯುತ್ತಿದ್ದರೂ ಜೋತಿಬಾ ಅವರು, ತಾವು ಶಾಲೆಯಲ್ಲಿ ಕೇಳಿದ್ದ ಮತ್ತು ಓದಿದ್ದ ಅಮೆರಿಕನ್ ಸ್ವಾತಂತ್ರ್ಯ ಹೋರಾಟದ ಕುರಿತಾಗಿ ತುಂಬಾ ಪ್ರಭಾವಿತರಾಗಿದ್ದರು. ಜಾರ್ಜ್ ವಾಷಿಂಗ್‌ಟನ್ ಫೂಲೆ ಅವರ ಮೇಲೆ ತುಂಬ ಪರಿಣಾಮ ಬೀರಿದ್ದ ಜನನಾಯಕನಾಗಿದ್ದನು. ಜೊತೆಗೆ ಶಿವಾಜಿಯ ಕುರಿತಾಗಿಯೂ ಅಗಾಧ ಆಕರ್ಷಣೆ ಇದ್ದಿತು. ಆ ಚಿಕ್ಕ ವಯಸ್ಸಿನಲ್ಲಿಯೇ ತನ್ನ ಸ್ನೇಹಿತನ ಜೊತೆಗೂಡಿ ಯೂರೋಪಿಯನ್ ರಾಜಕೀಯ ತತ್ವಶಾಸ್ತ್ರಜ್ಞ ಥಾಮಸ್ ಪೇನ್ ಎಂಬುವನ 'ರೈಟ್ಸ್ ಆಫ್ ನ್ಯೂಸ್' ಎಂಬ ಪುಸ್ತಕವನ್ನು ಕೂಲಂಕುಷವಾಗಿ ಅಭ್ಯಾಸ ಮಾಡಿದರು. ಈ ಓದಿನಿಂದಾಗಿ ತರುಣ ಫೂಲೆ ಅವರ ಮನಸ್ಸಿನಲ್ಲಿ ತನ್ನ ಜನಗಳ ಸ್ಥಿತಿ, ತನಗಿಂತ ಕೆಳಸ್ತರಗಳಲ್ಲಿರುವ ಜಾತಿಗಳವರ ಸ್ಥಿತಿ, ಒಟ್ಟು ಭಾರತೀಯ ಪರಿಸರದ ಕುರಿತಾಗಿ ವಿಚಾರಗಳು ಸ್ಫುರಿಸುವುದಕ್ಕೆ ಆರಂಭವಾಯಿತು.

ಈ ಹಿಂದೂ ಧರ್ಮವೆಂದರೆ ಏನು, ಎಂದು ಚಿಂತಿಸಲು ಆರಂಭಿಸಿದರು.

ವಲಸೆಗಾರರಾಗಿ ಬಂದ 'ಭೂಸುರ'ರು ಮೂಲನಿವಾಸಿಗಳಾಗಿದ್ದವರನ್ನು ರಾಕ್ಷಸರು ಎಂದು ಕರೆದು ಅವರನ್ನು ಸದೆಬಡಿದು ಸಂಪೂರ್ಣ ತಮ್ಮ ಆಳ್ವಿಕೆಗೆ ಒಳಪಡಿಸಿದರು. ಗಂಗಾತೀರದಲ್ಲಿ ಮಾತ್ರ ನೆಲೆಸಿದ ಈ ವಲಸೆಗಾರರು ಕಾಲ ಕ್ರಮೇಣ ಇಡೀ ಭಾರತವನ್ನು ಆಕ್ರಮಿಸಿಕೊಂಡರು. ಪುರಾಣಗಳನ್ನು ಸೃಷ್ಟಿಸಿದರು. ಜಾತಿ ಪದ್ಧತಿಯನ್ನು ಜಾರಿಗೆ ತಂದರು. ಇಡೀ ಮನುಷ್ಯಕುಲದಲ್ಲಿಯೇ ಮತ್ತೊಂದು ನಿದರ್ಶನ ಸಿಗದಂಥ ಅಮಾನವೀಯ ಹಾಗೂ ಕ್ರೂರ ವ್ಯವಸ್ಥೆಯನ್ನು ನಿರ್ಮಿಸಿದರು. ನಡೆದದ್ದು ಒಂದು ಆಕ್ರಮಣ. ವಂಚನೆ ಮತ್ತು ಧಾರ್ಮಿಕ ಭ್ರಮೆಗಳನ್ನು ಸೃಷ್ಟಿಸಿ ನಾಡನ್ನು ಕಬಳಿಸಲಾಯಿತು. ಈ ವಂಚನೆಗೇ ಹಿಂದೂ ಧರ್ಮ ಎಂದು ಹೆಸರು ಎಂದು ಫೂಲೆ ಅವರು ತೀರ್ಮಾನಕ್ಕೆ ಬಂದರು.

ಆಪ್ತಕರೆನಿಸಿಕೊಂಡ ಈ ವಲಸೆಗಾರ ಜನ ಇಂಡೋ ಯೂರೋಪಿಯನ್ ಬುಡಕಟ್ಟಿನವರು. ಇವರು ಇತರರಿಗಿಂತ ಉತ್ತಮರು ಎನ್ನುವುದಕ್ಕಿಂತ ಇತರರಿಗಿಂತ ಹೆಚ್ಚು ಕ್ರೂರರೂ, ಹಿಂಸಾವಾದಿಗಳಾಗಿದ್ದರು ಎಂದು ಫೂಲೆ ಅವರು ತಿಳಿಯುತ್ತ ಬಂದರು. ಸಮೃದ್ಧ ಹಾಗೂ ಸಮಾನತೆಯ ಮೌಲ್ಯದ ಮೇಲೆ ನಿರ್ಮಾಣಗೊಂಡಿದ್ದ ಸಮಾಜವೊಂದನ್ನು ಕ್ರೌರ್ಯ ಹಾಗೂ ವಂಚನೆಗಳ ಮೂಲಕ ನಾಶಮಾಡಿದ ಈ ವಲಸೆಗಾರರು ತಮ್ಮ ಶ್ರೇಷ್ಠತೆಯನ್ನು ಈ ನಾಡಿನ ನೆಲದಲ್ಲಿ ಶಾಶ್ವತವಾಗಿ ಸ್ಥಾಪಿಸಲು ವೇದ, ಪುರಾಣಗಳನ್ನು ಸೃಷ್ಟಿಸಿ, ತಾವು ಆಕ್ರಮಿಸಿಕೊಂಡ ಜನಗಳು ಅವನ್ನು ಓದಬಾರದೆಂದೂ ಅವರುಗಳಿಗೆ ಈ ಪವಿತ್ರ ಗ್ರಂಥಗಳು ನಿಷಿದ್ಧವೆಂದೂ ಆಣತಿಗಳನ್ನು ಹೊರಡಿಸಿದರು.

ಈ ಭೂಮಿಯ ಮೇಲೆ ಪರಮಾತ್ಮನ ಅವತಾರಗಳೆಂಬುವು, ಈ ಬುದ್ಧಿವಂತ ಜನ ಭಾರತವನ್ನು ಆಕ್ರಮಿಸಿದ ವಿವಿಧ ಹಂತಗಳ ನಿರೂಪಣೆಯಷ್ಟೆ, ಎಂದು ಫೂಲೆಯವರಿಗೆ ಹೊಳೆಯಿತು. ಈ ಎಲ್ಲ ಅವತಾರಗಳಲ್ಲಿ ಫೂಲೆಯವರಿಗೆ ಅತ್ಯಂತ ಮಾರ್ಮಿಕವೂ, ಸಾಂಕೇತಿಕವೂ ಮತ್ತು ಕೇಂದ್ರಬಿಂದುವೂ ಆಗಿ ಕಂಡದ್ದು ಬಲಿ ಚಕ್ರವರ್ತಿಯ ಕತೆ. ಫೂಲೆ ಪುನರ್ ಸೃಷ್ಟಿಸಿದ ಈ ಬಲಿಯ ಕತೆಯ ಪ್ರಕಾರ ಬಲಿ ಮಹಾರಾಜ ಮಹಾರಾಷ್ಟ್ರದ ಚಕ್ರವರ್ತಿ. ಆದರ್ಶ ರಾಜ್ಯ ಸ್ಥಾಪನೆ ಮಾಡಿ, ಜಾತ್ಯಾತೀತವೂ ಸಮೃದ್ಧವೂ ಆದ ನಾಡನ್ನು ಆಳುತ್ತಿದ್ದ ಲೋಕಪ್ರಿಯ ರಾಜನಾಗಿದ್ದನು. 'ವಾಮನನ ಮೂರು ಹೆಜ್ಜೆಗಳ ದಾನದ ಕತೆ' ಆರ್ಯರು ಮೂಲನಿವಾಸಿಗಳನ್ನು, ಶಕ್ತಿಯಿಂದ ಆಗದಿದ್ದಾಗ ಯುಕ್ತಿಯಿಂದ, ವಂಚನೆಯಿಂದ ಆಕ್ರಮಣ ಮಾಡಿದ ಕತೆಯಷ್ಟೇ ಎಂದು ಫೂಲೆಯವರು ಘೋಷಿಸಿದರು. ಇಂದಿಗೂ ಕೂಡ ಬಲಿ ಮಹಾರಾಜ ಒಬ್ಬ ಜನಪ್ರಿಯ, ರೈತ ಅಧಿಪತಿಯಾಗಿಯೇ ಜನ ಆರಾಧಿಸುವುದು. "ಕಷ್ಟ ದುಃಖಗಳೆಲ್ಲ ಪರಿಹಾರವಾಗಲಿ, ಬಲಿ ಮಹಾರಾಜನ ಆಳ್ವಿಕೆ ಮರಳಿ ಬರಲಿ" ಎಂದೇ ಇಂದಿಗೂ ಮಹಾರಾಷ್ಟ್ರದ ಜನ ಹಾಡುವುದು, ಬೇಡುವುದು. ಭಾರತದ ಮೇಲೆ ನಡೆದ ಪ್ರಪ್ರಥಮ ಆಕ್ರಮಣ ಆರ್ಯರದು ಮತ್ತು ಅತ್ಯಂತ ಕ್ರೂರ ಆಕ್ರಮಣವೂ ಹೌದು ಎಂದು ಫೂಲೆ ವಾದಿಸಿದರು. ಈ ಬ್ರಾಹ್ಮಣಶಾಹಿ ಅಥವಾ 'ಭಟ್‌ಶಾಹಿ' ರಾಜಕೀಯ ಶಕ್ತಿಯನ್ನು ಬಳಸಿ, ಧಾರ್ಮಿಕ ಪ್ರಾಬಲ್ಯಗಳ ತಂತ್ರಗಳ ಮೂಲಕ ತಮ್ಮ ಶೋಷಣೆಯ ಮಾರ್ಗಗಳನ್ನು ಸುಲಭಗೊಳಿಸಿಕೊಂಡರು. ಹಿಂದೂ ಧರ್ಮದ ಅಸ್ತಿತ್ವವನ್ನು ಪ್ರತಿ ಹಂತದಲ್ಲಿಯೂ ಪ್ರಶ್ನಿಸುತ್ತ ಬಂದ ಫೂಲೆ ಅವರು ಈ ಧರ್ಮ ಎಷ್ಟು ತರ್ಕಸಮ್ಮತ, ನ್ಯಾಯಸಮ್ಮತ ಎಂಬ ಸವಾಲುಗಳನ್ನು ಹಾಕಿದರು. ಫೂಲೆ ಅವರ ಪ್ರಕಾರ ಹಿಂದೂ ಧರ್ಮ ಮೂಢನಂಬಿಕೆ, ಕುತಂತ್ರಗಳ ಆಗರ ಮತ್ತು ಆಕ್ರಮಣಶೀಲತೆಗೆ ಬಳಸಿದ ಅಸ್ತ್ರ. ಈ ನಾಡಿನಲ್ಲಿ ಈ 'ಭೂಸುರ'ರು ಸಲ್ಲಬೇಕಾದರೆ ಅವರ ಖೋಟಾ ಪವಿತ್ರ ಗ್ರಂಥಗಳನ್ನು ಅಲ್ಲಗಳೆದು, ಮನುಷ್ಯಕುಲವನ್ನು ತಮ್ಮ ಸಮಾನವೆಂದು ತಿಳಿಯುತ್ತ ಸತ್ಯಮಾರ್ಗವನ್ನು ಅನ್ವೇಷಿಸಲು ಮೊದಲು ಮಾಡಿದರೆ ಮಾತ್ರ ಸಾಧ್ಯ ಎಂದು ಸ್ಪಷ್ಟವಾಗಿ ಸಾರಿದರು. ಮನುಸ್ಮೃತಿಯನ್ನು ಇನ್ನಿತರ ಧರ್ಮಶಾಸ್ತ್ರಗಳನ್ನೂ ನಿರಾಕರಿಸದೆಯೆ ಈ ದೇಶದ ಮೂಲ ನಿವಾಸಿಗಳ ಜೊತೆಗೆ ಆರ್ಯರು ಒಂದಾಗುವುದು ಸಾಧ್ಯವಿಲ್ಲ.

ಹೀಗಾಗಿಯೆ ಲೌಕಿಕ ಶಿಕ್ಷಣ, ಜ್ಞಾನಾರ್ಜನೆ, ವಿದ್ಯೆ ಎಂಬುದು ಫೂಲೆಯವರ ದೃಷ್ಟಿಯಲ್ಲಿ ಒಂದಾದರೆ ಈ ಉಚ್ಚವರ್ಗಕ್ಕೆ ಸೇರಿದ ಶೋಷಕ ವರ್ಗದವರ ದೃಷ್ಟಿಯಲ್ಲಿ ಬೇರೆಯೇ ಆಗಿದೆ. ಫೂಲೆ ಅವರ ಪ್ರಕಾರ ಶಿಕ್ಷಣವೆಂಬುದು ತನ್ನ ಜನಗಳಿಗೆ ಪ್ರಗತಿಯ ಅಸ್ತ್ರಗಳು, ಸಮಾನತೆಗೆ ಮತ್ತು ಮನುಷ್ಯ ಸ್ವಾತಂತ್ರ್ಯಗಳಿಗಾಗಿ ಬಳಸುವ ಉಪಕರಣ. ಆದರೆ, ಉಚ್ಚ ವರ್ಗದವರಿಗೆ ಶಿಕ್ಷಣ ಈ ಪ್ರಾಪಂಚಿಕ ಬದುಕಿನಲ್ಲಿ ಉದ್ಧಾರವಾಗುವುದಕ್ಕೆ ಬೇಕಾಗುವ ಒಂದು ಅವಶ್ಯಕತೆ.

ಈ ಎಲ್ಲ ಭಯಂಕರ ಸವಾಲುಗಳನ್ನು ಎದುರಿಸಿ ಈ ನಾಡಿನ 'ಶೂದ್ರ'ರನ್ನು, 'ಬಹುಜನ ಸಮಾಜ'ವನ್ನು

ಹೇಗೆ ಉದ್ಧರಿಸುವುದು ಎಂಬ ಪ್ರಶ್ನೆ ಫೂಲೆ ಅವರಿಗೆ ತೀವ್ರವಾಗಿ ಕಾಡಿತು. ಪ್ರಪ್ರಥಮವಾಗಿ ಅವರು ಸಾಧಿಸಲು ಬಯಸಿದ್ದು ಎಂದರೆ ಬ್ರಾಹ್ಮಣೇತರರಾದ ಶೂದ್ರರನ್ನು ಮತ್ತು ದಲಿತರೆನಿಸಿಕೊಂಡ ಅತಿಶೂದ್ರರನ್ನು ಒಟ್ಟು ಮಾಡುವುದು. ಇಬ್ಬರದೂ ಗುರಿ ಒಂದೇ ಆಗಬೇಕು - ಸಮಾನತೆ ಮತ್ತು ಘನತೆಗಳನ್ನು ಸಂಪಾದಿಸುವುದು; ಅಜ್ಞಾನದಿಂದ, ಮೌಢ್ಯದಿಂದ, ದಾಸ್ಯ ಮನೋಭಾವದಿಂದ ಮುಕ್ತಗೊಳ್ಳುವುದು. ಇದನ್ನು ಸಾಧಿಸುವುದಕ್ಕೆ ಅವರು ಯೋಚಿಸಿದ ಮೊದಲ ಮಾರ್ಗವೆಂದರೆ - ಶೂದ್ರಾತಿಶೂದ್ರರಿಗೆ ಮತ್ತು ಹೆಣ್ಣು ಮಕ್ಕಳಿಗೆ ಶಾಲೆಗಳನ್ನು ತೆರೆಯುವುದು. ೨೧ ವರ್ಷದ ಯುವಕ ಫೂಲೆ ತಮ್ಮ ಪ್ರಥಮ ಶಾಲೆಯನ್ನು ಆರಭಿಸಿದರು. ಮನೆಯಲ್ಲಿಯೇ ಅಕ್ಷರಾಭ್ಯಾಸವೂ, ಶಿಕ್ಷಣವೂ ಪಡೆದಿದ್ದ ಫೂಲೆ ಅವರ ಪತ್ನಿ ಸಾವಿತ್ರಿಬಾಯಿಯವರನ್ನು ಕೂಡ ಶಾಲಾ ಶಿಕ್ಷಕಿಯಾಗಿ ನೇಮಿಸಿದರು.

'ಹೆಣ್ಣುಮಕ್ಕಳಿಗೆ ಶಾಲೆ', 'ಹೆಣ್ಣುಮಗಳು ಶಾಲಾ ಶಿಕ್ಷಕಿ' ಎಂದೆಲ್ಲ ಗಮನಿಸಿದ ಉಚ್ಚವರ್ಗದವರು ಹೌಹಾರಿದರು. ಜೋತಿಬಾ ತಂದೆಯ ಬಳಿ ಬಂದು ಬೆದರಿಸಿದರು. ತಂದೆ ಸಂಪ್ರದಾಯಸ್ಥ. ಮಗನಿಗೆ 'ಬುದ್ಧಿವಾದ' ಹೇಳಿದರು. 'ಒಂದೋ ಶಾಲೆ ಬಿಡು, ಇಲ್ಲವೊ ಮನೆ ಬಿಟ್ಟು ಹೋಗು' ಎಂದು ಅತ್ಯಂತ ಖೇದದಿಂದ ಹೇಳಿದರು. ಜೋತಿಬಾ ಹೆಂಡತಿಯನ್ನು ಕಟ್ಟಿಕೊಂಡು ಮನೆಬಿಟ್ಟು ನಡೆದರು.

ಮನೆಬಿಟ್ಟು ನಡೆದ ಮೇಲೆ ಹೊಟ್ಟೆ ಹೊರೆಯುವುದಕ್ಕೆ ಮತ್ತೂ ಅಷ್ಟು ಕಷ್ಟಪಡಬೇಕಾಯಿತು. ಜೊತೆಗೆ ಬದುಕು ಮತ್ತಷ್ಟು ದುರ್ಭರವಾಯಿತು. ಆದರೆ ಜೋತಿಬಾ ಕಂಗೆಡಲಿಲ್ಲ.

ತನ್ನ ಜನಗಳ ಮಧ್ಯದಲ್ಲಿ 'ವಿಚಾರ ಮಾಡಿ ಯಾವ ಪ್ರಶ್ನೆಯನ್ನಾದರೂ ಎದುರಿಸುವುದು ಹೇಗೆ?' ಎಂಬುದರ ಕುರಿತು ತಿಳಿಸುತ್ತ ಹೋದರು. ಭಯ, ಆತಂಕಗಳು ಬಿಟ್ಟು ಯೋಚನೆ ಮಾಡುವುದು ಹೇಗೆ? ದಾಸ್ಯ ಮನೋಭಾವವೂ ಕೂಡ ಒಂದು ಧಾರ್ಮಿಕ ನಂಬಿಕೆಯೇ ಆಗಿಬಿಡುವ ಅಪಾಯವನ್ನು ತೋರಿಕೊಡುತ್ತ ಹೋದರು. ಪ್ರಯೋಗಾರ್ಥವಾಗಿ ಅವರು ತಮ್ಮ ಜನಕ್ಕೆ ಹೇಳಿದರು. 'ಇನ್ನು ಮುಂದೆ ನಿಮ್ಮ ಮನೆಗಳಲ್ಲಿ ನಡೆಯುವ ಮದುವೆ ಇನ್ನಾವ ಕಾರ್ಯಕ್ಕೂ ಬ್ರಾಹ್ಮಣರನ್ನು ಪೌರೋಹಿತ್ಯಕ್ಕೆ ಕರೆಯಬೇಡಿ. ಹಾಗೆ ಅವರಿಗೆ ದಕ್ಷಿಣೆ ನೀಡುವ ಹಣ ಉಳಿಯುವುದನ್ನು ನಿಮ್ಮ ಮಕ್ಕಳ ಶಿಕ್ಷಣಕ್ಕೆ ಬಳಸಿರಿ' ಎಂದು. ಇದು ಅತ್ಯಂತ ಕ್ರಾಂತಿಕಾರಕ ಸಲಹೆಯಾಯಿತು. ಪುರೋಹಿತಶಾಹಿಗೆ ಮತ್ತೂ ಅಷ್ಟು ರಕ್ತ ಬಿಸಿಯಾಯಿತು.

ಅಷ್ಟೇ ಅಲ್ಲ, ಫೂಲೆ ಅವರು ಈ ಎಲ್ಲಾ ಐತಿಹಾಸಿಕವಾದ ನಿರ್ಣಯಗಳನ್ನು ತಮ್ಮ ಜನಗಳಿಗೆ-ವಿಶೇಷವಾಗಿ ಕ್ಷೌರಿಕ ಜನಾಂಗಕ್ಕೆ ನೀಡಿದರು. "ಹೆಣ್ಣಿಗೆ ಆಕೆಯ ತಲೆಯ ಕೂದಲು ಅಲಂಕಾರ, ಆಭರಣ. ಆಕೆಯ ಹೆಮ್ಮೆ. ಉಚ್ಚವರ್ಗದಲ್ಲಿ ಅಕಸ್ಮಾತ್ ಹೆಣ್ಣುಮಕ್ಕಳು ವಿಧವೆಯರಾದರೆ ಅವರ ತಲೆ ಕೂದಲು ತೆಗೆಸುವ ಪದ್ಧತಿ ಇದೆ. ಇದು ಕ್ರೂರ ಪದ್ಧತಿ. ಅಮಾನವೀಯ. ಆದದ್ದರಿಂದ ಇನ್ನೂ ಮುಂದೆ ವಿಧವೆಯರಾದವರಿಗೆ ತಲೆಕೂದಲು ತೆಗೆಯಲು ನಾವು ಒಪ್ಪುವುದಿಲ್ಲ ಎಂದು ನಿರ್ಧಾರ ಮಾಡಿ" ಅಂದರು. ಫೂಲೆ ಅವರಲ್ಲಿ ಅಪಾರ ಭಕ್ತಿ, ಗೌರವಗಳಿದ್ದ ಕ್ಷೌರಿಕವರ್ಗ ಅವರ ಸಲಹೆಗೆ ಒಪ್ಪಿ ಹಾಗೆಯೇ ನಡೆದುಕೊಂಡಿತು. ಇಡೀ ಸಮಾಜದಲ್ಲಿ ಕೋಲಾಹಲವೆದ್ದುಬಿಟ್ಟಿತು. ಇದು ಬ್ರಾಹ್ಮಣವರ್ಗಕ್ಕೆ ನೇರವಾಗಿ ಗುರಿಮಾಡಿ ಪ್ರಯೋಗಿಸಿದ ಮಾರಕಾಸ್ತ್ರವಾಗಿ ಕಂಡಿತು. ದಿಕ್ಕು ತೋಚದೇ ಬ್ರಾಹ್ಮಣರೇ ವಿಧವೆ ಹೆಣ್ಣುಮಕ್ಕಳ ಕೇಶಮುಂಡನ ಮಾಡಲು ಆರಂಭಿಸಿ ಇಡೀ ಸಮಾಜದ ಅಪಹಾಸ್ಯಕ್ಕೆ ಗುರಿಯಾದರು.

ಆ ಕಾಲದಲ್ಲಿ ವಿಧವಾ ವಿವಾಹದ ಕುರಿತಾಗಿಯೂ ಅಲ್ಲಲ್ಲಿ ಮಾತುಗಳಾಗುತ್ತಿದ್ದವು; ಪರಿಸ್ಥಿತಿ ಎಷ್ಟು ಕ್ರೂರವಾಗಿತ್ತೆಂದರೆ ವಿಧವೆಯರಾದ ಅತ್ಯಂತ ಕಿರಿಯ ವಯಸ್ಸಿನ ಹೆಣ್ಣುಮಕ್ಕಳು ಅಕಸ್ಮಾತ್ ಗರ್ಭಿಣಿಯಾಗಿಬಿಟ್ಟರೆಂದರೆ ಅವರಿಗಿದ್ದ ಎರಡು ಮಾರ್ಗಗಳಲ್ಲಿ ಒಂದು ಆತ್ಮಹತ್ಯೆ, ಮತ್ತೊಂದು ಶಿಶುಹತ್ಯೆ. ಈ ವಿಷಯ ಎಲ್ಲರಿಗೂ ಗೊತ್ತಿದ್ದುದು, ಆದರೂ ಯಾರೂ ಇದರ ಕುರಿತು ಮಾನವೀಯವಾಗಿ

ಚಿಂತಿಸಿದ್ದಂತೆ ಕಂಡಿರಲಿಲ್ಲ. ಈಗ ಫೂಲೆಯವರು ಮುಂದಾಗಿ ಹೇಳಿದರು "ಇನ್ನು ಮುಂದೆ, ದುರದೃಷ್ಟವಶಾತ್ ವಿಧವೆಯರಾದ ಹೆಣ್ಣು ಮಕ್ಕಳು ಗರ್ಭಿಣಿಯರಾದರೆ ಅವರು ಸಾಯಬೇಕಿಲ್ಲ ಅಥವಾ ಮಕ್ಕಳನ್ನೂ ಕೊಲ್ಲಬೇಕಿಲ್ಲ. ಆ ಮಕ್ಕಳನ್ನು ನಮ್ಮ ಸುಪರ್ದಿಗೆ ಒಪ್ಪಿಸಬಹುದು. ನಾವು ಪ್ರೀತಿಯಿಂದ ಆ ಮಕ್ಕಳನ್ನು ಸಾಕುತ್ತೇವೆ" ಎಂದು. ಈ ಘೋಷಣೆಯಂತೂ ಉಚ್ಚವರ್ಗದ ಕಿವಿಗಳಿಗೆ 'ವೇಶ್ಯಾವೃತ್ತಿಗೆ ಪ್ರೋತ್ಸಾಹ' ಎಂಬಂತೆಯೇ ಕೇಳಿಸಿಬಿಟ್ಟಿತು. ನೀತಿಗೆಟ್ಟ ಮನುಷ್ಯ ಈ ಫೂಲೆ ಎಂದು ಹಬ್ಬಿಸಿದರು.

ಫೂಲೆ ತಾವು ಹೇಳಿದಂತೆ ನಡೆದುಕೊಂಡರು ಎಂಬುದಕ್ಕೆ ಅವರ ವೈಯಕ್ತಿಕ ಜೀವನದ ಒಂದು ಸಂದರ್ಭವೇ ಸಾಕು. ಫೂಲೆ ಅವರಿಗೆ ಮಕ್ಕಳಾಗಲಿಲ್ಲ. ಅವರ ತಂದೆ ಹಾಗೂ ಅತ್ತೆ ಮಾವಂದಿರು ಕೂಡ ಎರಡನೆ ಮದುವೆಗೆ ಒತ್ತಾಯಿಸಿದರು. ಆಗ ಫೂಲೆ ಹೇಳಿದರು "ಮಕ್ಕಳಾಗದಿರುವುದಕ್ಕೆ ಗಂಡ ಅಥವಾ ಹೆಂಡತಿ ಇಬ್ಬರಲ್ಲಿ ಒಬ್ಬರಿಗೆ ದೋಷವಿದ್ದಿರಬೇಕು ಎಂದು ಅರ್ಥ. ಅವಳಲ್ಲಿ ದೋಷವಿದೆ ಎಂದು ನಾನು ಮದುವೆಯಾಗುತ್ತೇನೆ ಸರಿ. ಆದರೆ ಅಕಸ್ಮಾತ್ ನನ್ನಲ್ಲಿಯೇ ದೋಷವಿದ್ದರೆ ಅವಳು ಮರುಮದುವೆಯಾಗಲು ಒಪ್ಪುತ್ತೀರಾ?" ಎಂದು ಕೇಳಿದರು. ಅವರ ಪುನರ್ವಿವಾಹದ ಮಾತು ಅಲ್ಲಿಗೆ ಮುಕ್ತಾಯವಾಯಿತು.

ನೀರಿಗಾಗಿ ಇಡೀ ಊರು ಮಡಿ - ಮೈಲಿಗೆಗಳ ದೊಂಬರಾಟದಲ್ಲಿ ತೊಡಗಿದ್ದಾಗ ಕೆಳವರ್ಗದವರನ್ನು ಊರಿನ ಬಾವಿಯಿಂದ ದೂರವಿಟ್ಟಾಗ ಫೂಲೆಯವರು ತನ್ನ ಮನೆಯ ಬಾವಿಯನ್ನು ಮುಕ್ತವಾಗಿ ಯಾರು ಬೇಕಾದರೂ ಬಳಸಬಹುದು ಎಂದು ಹೇಳಿಕೆ ಕೊಟ್ಟರು. ಶಾಲೆಗೆ ಬರುವ ಮಕ್ಕಳಿಗೆ ಊಟ, ಬಟ್ಟೆ, ಪುಸ್ತಕಗಳನ್ನೆಲ್ಲ, ಎಲ್ಲೆಲ್ಲಿ ಅವಶ್ಯಕವೋ ಅಲ್ಲೆಲ್ಲ ತಾವೇ ಒದಗಿಸುತ್ತಿದ್ದರು.

ಇಷ್ಟೆಲ್ಲ ನಿಜವಾದರೂ ಕೆಲವರ ದೃಷ್ಟಿಯಲ್ಲಿ - ಈಗ ಇಷ್ಟು ವರ್ಷಗಳ ನಂತರ - ಫೂಲೆ ಬ್ರಿಟಿಷ್ ಆದಿಪತ್ಯದ ಪರ ಎನ್ನಿಸಿಬಿಡಬಹುದು. ಹಾಗೆ ನೋಡಹೋದರೆ ಅಂಬೇಡ್ಕರ್ ಅವರಿಗಿಂತ ಬಹು ಮೊದಲೇ, ದಶಕಗಳಿಗೂ ಮುಂಚೆ, ಫೂಲೆ ಅವರು "ಬ್ರಿಟಿಷ್ ರಾಜ್‌ಗಿಂತ ನನಗೆ ಈ ಬ್ರಾಹ್ಮಣರಾಜ್ ಬಗ್ಗೆ ಆತಂಕಗಳಿವೆ" ಎಂದು ಹೇಳಿದ್ದರು. ಇನ್ನೂ ಮುಂದೆ ಹೋಗಿ ತಮ್ಮ ಜನಗಳಿಗೆ ಹೇಳುತ್ತಿದ್ದರು "ಈ ಬ್ರಿಟಿಷ್ ರಾಜ್ ಇನ್ನೆಷ್ಟು ದಿನಗಳಿರುತ್ತವೆಯೋ ತಿಳಿಯದು. ಅಷ್ಟರಲ್ಲಿ ನೀವು ವಿದ್ಯಾವಂತರಾಗಬೇಕು. ಸುಶಿಕ್ಷಿತರಾಗಬೇಕು. ದೇಶವನ್ನೇ ಆಳುವ ಸಾಮರ್ಥ್ಯ ಪಡೆಯಬೇಕು" ಎಂದು. ದೇಶದ ಸ್ವಾತಂತ್ರ್ಯವೆಂಬುದು ಅಮೂರ್ತವಾಗಿಬಿಡಬಲ್ಲ ಅಪಾಯವಿದೆ. ಕಣ್ಣೆದುರಿಗಿನ ಜನಗಳ ದಾರಿದ್ರ್ಯ, ಅನಕ್ಷರತೆ, ಅಸಮಾನತೆ ಮೂರ್ತವಾಗಿ ಕಣ್ಣು ಚುಚ್ಚುತ್ತದೆ. ಫೂಲೆ ಅವರು ಕಣ್ಣಿಗೆ ಚುಚ್ಚುವ ಸತ್ಯವನ್ನು ಆರಿಸಿಕೊಂಡರು. ಹೆಚ್ಚು ಒತ್ತು ಕೊಟ್ಟರು. ಹಾಗೆಂದ ಮಾತ್ರಕ್ಕೆ ಅವರನ್ನು, ಬಹು ಸರಳೀಕರಿಸಿ, ದಾಸ್ಯಮನೋಭಾವದ ಗುಲಾಮ ಎಂದು ತೀರ್ಮಾನಿಸಿಬಿಡುವುದು ಅತ್ಯಂತ ಬೇಜವಾಬ್ದಾರಿಯ ತೀರ್ಮಾನವಾಗುತ್ತದೆ.

ಫೂಲೆ ಅವರು ಅನೇಕ ಪುಸ್ತಕಗಳನ್ನು ಬರೆದರು. ರೈತ ಸಮುದಾಯದ ಶೋಷಣೆಯ ಕುರಿತಾಗಿ 'ಶೇಟ್ ಕಾರ್ಯಚ ಅಸೂರ್' ಸಮಾನತೆಯ ಧರ್ಮವನ್ನು ಬೋಧಿಸುವ 'ಸಾರ್ವಜನಿಕ ಸತ್ಯಧರ್ಮ' ಎಂಬುದನ್ನು ಹಲವು ಪದ್ಯಗಳನ್ನು ಅನೇಕ ಕಿರುಹೊತ್ತಿಗೆ ಕರಪತ್ರಗಳನ್ನು ರಚಿಸಿದರು. ಅವರ ಇಡೀ ಜೀವನದ ಒಂದೇ ಶ್ರದ್ಧೆ ಎಂದರೆ - ತನ್ನ ಜನ ತಮ್ಮ ಕಾಲುಗಳ ಶಕ್ತಿ ಕಂಡುಕೊಂಡು, ಬೆನ್ನೆಲುಬಿನಲ್ಲಿ ಚೈತನ್ಯ ತುಂಬಿಕೊಂಡು ಎದೆ ಸೆಟೆದು ನಿಲ್ಲುವಂತಾಗಲಿ ಎಂದು. ಅರವತ್ತನೆ ವರ್ಷಕ್ಕೆ ಅವರಿಗೆ ಸನ್ಮಾನ ಮಾಡಿ ಇದೇ ಜನತೆ ಅವರನ್ನು ಮಹಾತ್ಮ ಎಂದು ಕರೆದು ಗೌರವಿಸಿತು.

(ಮುಂದಿನ ಸಂಚಿಕೆಯಲ್ಲಿ ಕುಂ. ವೀರಭದ್ರಪ್ಪ ಅವರ - ರಾಹುಲ್ ಸಾಂಕೃತ್ಯಾಯನ)

# ಎರಡು ನಾಟಕಗಳು - ನರ್ತಕಿಯ ಪೂಜೆ, ಚಾಂಡಾಲಿಕಾ.

**- ಆರ್.ವಿ. ಭಂಡಾರಿ**

'ನರ್ತಕಿಯ ಪೂಜೆ' ಮತ್ತು 'ಚಾಂಡಲಿಕಾ' ಎಂಬೆರಡು ನಾಟಕಗಳು ಏಕಕಾಲಕ್ಕೆ ಭೌತಿಕ ಮತ್ತು ಆಧ್ಯಾತ್ಮಿಕ ನೆಲೆ ಎರಡರಲ್ಲೂ ನಡೆಯುತ್ತದೆ. ಅವುಗಳ ಅತ್ಯಂತಿಕ ಆವಿಷ್ಕಾರ ಮಹಾಮಾನವತೆಯ ಭಾಷ್ಯವೇ ಆಗಿದೆ ಎಂದರೆ ಸಲ್ಲುತ್ತದೆ.

ಮಹಾಮಾನವತಾವಾದಿಗಳಾದ ರವೀಂದ್ರನಾಥ್ ಟಾಗೋರರು ಅದಕ್ಕೂ ಹಿಂದಿನ ಕಾಲದ ಮಹಾಮಾನವತಾವಾದಿ ಬುದ್ಧನ ಸಿದ್ಧಾಂತಕ್ಕೆ ಮಿಡಿದ ಕಲಾತ್ಮಕ ಕೃತಿ ಇದಾಗಿದೆ. ಇವೆರಡು ಸಾಂಕೇತಿಕ ನಾಟಕವಾಗಿದ್ದು ಈ ಸಾಂಕೇತಿಕೆಯ ಒಳಗಡೆ ಪ್ರವೇಶ ಮಾಡಿದಾಗ ಅತ್ಯುತ್ತಮವಾದ ಭಾವಾತ್ಮಕ ಲೋಕದ ದರ್ಶನವಾಗುತ್ತದೆ. ಇದನ್ನೇ ಬೇಕಾದರೆ 'ರಸದೌತಣ" ಎಂದು ಕರೆಯಬಹುದೇನೊ.

ಬೌದ್ಧಿಕ ನೆಲೆಯಲ್ಲಿ ಬೌದ್ಧ ಧರ್ಮ ತಂದ ಸಾಮಾಜಿಕ ಪರಿವರ್ತನೆ ಎಂಥ ಅದ್ಭುತವಾದುದೆಂಬುದು ಮೂರ್ತಗೊಳ್ಳುತ್ತಿದ್ದಂತೆ ಅದು ಬೀಸಿದ ವೈಚಾರಿಕ – ಆಧ್ಯಾತ್ಮಿಕ ಬೀಸು ಎಷ್ಟು ಪ್ರಖರವಾಗಿತ್ತು ಎಂಬುದು ನಿದರ್ಶನಗೊಳ್ಳುತ್ತದೆ.

ಒಂದು ಹಂತದಲ್ಲಿ 'ನರ್ತಕಿಯ ಪೂಜೆ'ಯಲ್ಲಿ ಬರುವ ಸಂಭಾಷಣೆ ಹೀಗಿದೆ:

"ಇವತ್ತು ವಸಂತ ಪೂರ್ಣಿಮೆ. ನಾವು ಭಗವಾನ್ ಬುದ್ಧನ ಜನ್ಮದಿನವನ್ನು ಆಚರಿಸುವವರಿದ್ದೇವೆ. ಪೂಜಾವಿಧಿಗಳು ಶ್ರೀಮತಿಯಿಂದ ಶುರುವಾಗಬೇಕು| ಯಾವ ಶ್ರೀಮತಿ ನೀವು ಹೇಳ್ತಾ ಇರೋದು?| ಈ ಶ್ರೀಮತೀನೆ| ಈ ರಾಜ ನರ್ತಕಿ?| ಯಾರು ಅಪ್ಪಣೆ ಕೊಡಿಸಿದ್ದು?| ಒಬ್ಬರು ಉಪಾಲಿ| ಉಪಾಲಿ? ಅವನೊಬ್ಬ ಕ್ಷೌರಿಕ| ಇನ್ನೊಬ್ಬರು ಸುನಂದಾ| ಅವನೊಬ್ಬ ದನ ಕಾಯುವವ ಅಲ್ವಾ?| ರಾಜಕುಮಾರಿ ಅವರೆಲ್ಲರ ಜಾತೀನೂ ಒಂದೇ. ಅವರಿಗೊಂದು ಉಚ್ಚಕುಲವಿದೆ; ಅದು ನಿಮಗೆ ಗೊತ್ತಿಲ್ಲ ಅಷ್ಟೆ."

ಇನ್ನೊಂದು ಸಂದರ್ಭ – ಚಾಂಡಲಿಕಾದಲ್ಲಿ:

ಮೊನ್ನೆ ನಡೆದದ್ದು. ಅರಮನೆಯ ಗಂಟೆ ಹನ್ನೆರಡು ಹೊಡೆದಿತ್ತು. ಹಳದಿಬಟ್ಟೆ ತೊಟ್ಟಿದ್ದ ಬೌದ್ಧ ಸನ್ಯಾಸಿಯೊಬ್ಬ ಬಂದು ನನ್ನ ಮುಂದೆ ನಿಂತು 'ನನಗೆ ನೀರುಕೊಡು' ಎಂದ ನನಗೆ ಆಶ್ಚರ್ಯವಾಯಿತು. ನಾನು ಹೇಳಿದೆ: ನಾನೊಬ್ಬ 'ಚಾಂಡಾಲಿನಿ' ಆದರೆ ಅವನು, 'ನಾನು ಹೇಗೆ ಒಬ್ಬ ಮನುಷ್ಯನೊ, ನೀನೂ ಹಾಗೆ ಮನುಷ್ಯಜಾತಿಯವಳು. ಮೇಲಾಗಿ ದೇಹಕ್ಕೆ ತಂಪುಂಟು ಮಾಡುವ ಹಾಗೂ ನೀರಡಿಕೆಯನ್ನು ಒದಗಿಸುವ ನೀರು ಪವಿತ್ರವಾದದ್ದೆ' ಎಂದ. ಅವನ ಬೊಗಸೆಗಳಲಿ ನೀರು ಸುರಿದೆ. ಯಾವ ಮನುಷ್ಯನ ಪಾದ ಧೂಳಿಯನ್ನೂ ನಾನು ಮುಟ್ಟಲಿಕ್ಕೆ ಧೈರ್ಯವಿಲ್ಲವೊ ಅಂತ ಮನುಷ್ಯ ಕೈಗಳಿಗೆ ಇದ್ದಕ್ಕಿದ್ದಂತೆ

---

**ನರ್ತಕಿಯ ಪೂಜೆ, ಚಾಂಡಾಲಿಕಾ**

ಮೂಲ: ರವೀಂದ್ರನಾಥ ಟಾಗೋರ್, ಅನುವಾದ: ಶ್ರೀನಿವಾಸ್ ಪಿ. ಸುತ್ರಾವೆ.

ಕೇಂದ್ರ ಸಾಹಿತ್ಯ ಅಕಾಡೆಮಿ, ಸೆಂಟ್ರಲ್ ಕಾಲೇಜ್ ಆವರಣ,

ಡಾ. ಬಿ.ಆರ್. ಅಂಬೇಡ್ಕರ ವೀಧಿ, ಬೆಂಗಳೂರು - ೫೬೦ ೦೦೧.

ಅವನು ಬಂದು ನನ್ನ ಸೇವೆ ಕೂಡ ಜಗದೊಡೆಯನಿಗೂ ಸಲ್ಲುತ್ತದೆ ಎಂಬ ಅದ್ಭುತ ಸತ್ಯವನ್ನು ನನಗೆ ತಿಳಿಸಿಕೊಟ್ಟ (ಪುಟ ೬೫)

ಈ ಎರಡೂ ಸನ್ನಿವೇಶಗಳು ಬುದ್ಧ ತಂದ ಅದ್ಭುತ ಸಾಮಾಜಿಕ ಪರಿವರ್ತನೆಯನ್ನು ಹೇಳುತ್ತದೆ. ಹೇಗೆ ಹೇಳುತ್ತದೆಂದರೆ ಟಾಗೋರರೇ ಬುದ್ಧನಲ್ಲಿ ಎರಕ ಹೊಯ್ದಿದ್ದಾರೋ ಎಂಬಂತೆ. ಇದು ಬುದ್ಧನದೂ ಹೌದು, ಟಾಗೂರರದೂ ಹೌದು. ಮೊದಲ ನಾಟಕದಲ್ಲಿಯ ರಾಜನರ್ತಕಿ ಭೌತಿಕ ಸ್ಥಾನದಿಂದ ಮೇಲೆದ್ದು ಆಧ್ಯಾತ್ಮಿಕ ಸ್ಥಾನಕ್ಕೆ ತಲುಪುತ್ತಾಳೆ. ಎರಡನೆಯ ನಾಟಕ – 'ಚಾಂಡಲಿಕ"ದಲ್ಲಿ ಚಾಂಡಾಲಿನಿ ಅವಸ್ಥಾಂತರದ ಪುನರ್ಜನ್ಮ ಪಡೆಯುತ್ತಾಳೆ.

'ನರ್ತಕಿಯ ಪೂಜೆ'ಯಲ್ಲಿ ಬೌದ್ಧ ಮತ್ತು ವೈದಿಕದ ನೆಲೆ – ರಾಜ ಮತ್ತು ಸೀಮನ್ಸ್ ನೆಲೆಯ ಸಂಘರ್ಷ – ಬಿಂಬಸಾರ ಮತ್ತು ದೇವದತ್ತರ ಮಧ್ಯದಲ್ಲಿದ್ದರೆ; ತಾಯಿ ಮಕ್ಕಳ ಸಂಸಾರಿಕ ಪ್ರೀತಿ ಮತ್ತು ಆಧ್ಯಾತ್ಮಿಕದ ಮಧ್ಯೆಯ ಸಂಘರ್ಷ – ರಾಣಿ ಲೋಕೇಶ್ವರಿ ಅಂತರಂಗದಲ್ಲಿ ನಡೆಯುತ್ತದೆ. ಇಂಥ ಭಾವಾತ್ಮಕ ಮತ್ತು ಬೌದ್ಧಿಕ ಲೋಕವನ್ನು ನಿರ್ಮಿಸಿಕೊಡಲು ಇಲ್ಲಿ ಭಾಷೆ ಶಕ್ತಿಯುತವಾಗಿ ಕೆಲಸ ಮಾಡುತ್ತದೆ. ತರ್ಕವನ್ನು – ಭಾವವನ್ನು ಏಕರೂಪವಾಗಿ ಎರಕ ಹೊಯ್ಯುತ್ತದೆ.

'ರಾಜನರ್ತಕಿಯ'ಕ್ಕಿಂತ 'ಚಾಂಡಾಲಿಕೆ'ಯಲ್ಲಿ ಈ ಸಾಂಕೇತಿಕವಾದ ಭಾಷೆ ಇನ್ನೂ ಎತ್ತರದ ಸ್ವರದಲ್ಲಿ ದುಡಿಯುತ್ತದೆ. ಇಲ್ಲಿಯ ನಾಟಕೀಯತೆ, ನಾಟಕ ಕ್ರಿಯೆ ಕೂಡ ಇನ್ನೂ ಎತ್ತರದ್ದು. ಅದು ಓದುಗರಿಂದ ಬಯಸುವುದೂ ಹೆಚ್ಚು.

ಒಂದು ಸಲ ಈ ಸಂಕೇತವನ್ನು ಒಡೆದು ಒಳ ಪ್ರವೇಶಿಸಿದರೆ ಅರ್ಥದ ಪದರು ಪದರುಗಳೇ ತೆರೆದುಕೊಳ್ಳುತ್ತವೆ. ಚಾಂಡಾಲಿಕಾದಲ್ಲಿ ಬರುವ 'ನೀರು' ಕೇವಲ ನೀರು ಮಾತ್ರ ಆಗಿಲ್ಲ. ಅದು ಪರಿವರ್ತನೆಯ ಸಲಕರಣೆಯೂ ಆಗುತ್ತದೆ. ಅದೇ ಕಾಲಕ್ಕೆ ಪ್ರೀತಿಯಾಗುತ್ತದೆ. ಆ ಪ್ರೀತಿಯು ಚಾಂಡಾಲಿಕೆಯ ತಾಯಿಯಲ್ಲಿ ಲೌಕಿಕ, ಆಧ್ಯಾತ್ಮಿಕ ಪುನರ್ಜನ್ಮವನ್ನೂ ಸಂಕೇತಿಸುತ್ತದೆ. ಇಲ್ಲಿ ಬರುವ ಮಂತ್ರ, ಕನ್ನಡಿ ಇವೆಲ್ಲವೂ ಕೇವಲ ವಾಚ್ಯಾರ್ಥದಲ್ಲಿ ದುಡಿಯದೆ ಅರ್ಥದ ಬೇರೆ ಬೇರೆ ಸ್ವರದಲ್ಲಿ ದುಡಿಯುತ್ತವೆ. ಕೊನೆಗೆ ಸಾಮಾಜಿಕವಾಗೂ, ಆಧ್ಯಾತ್ಮಿಕವಾಗೂ ಚಾಂಡಾಲಿನಿ ಪುನರ್ಜನ್ಮ ಹೊಂದುವುದರಲ್ಲಿ ಕೊನೆಗೊಳ್ಳುತ್ತದೆ.

ರವೀಂದ್ರನಾಥ ಟಾಗೋರ್‌ರ ಇಂಥ ಮಹತ್ವದ ನಾಟಕವನ್ನು ಅನುವಾದಿಸಿ ಕೊಟ್ಟ ಶ್ರೀನಿವಾಸ್ ವಿ. ಸುತ್ರಾವೆಯವರು ಹಾಗೂ ಪ್ರಕಾಶನ ಪಡಿಸಿದ ಸಾಹಿತ್ಯ ಅಕಾದೆಮಿಯವರು ಅಭಿನಂದಾರ್ಹರು.

---

## ನಾನು ಓದಿದ ಪುಸ್ತಕ : ಆಷಾಢದ ಒಂದು ದಿನ

- ಅಬ್ದುಲ್ ರೆಹಮಾನ್

"ಕಾಲದ ಜೊತೆಗೆ ಇಚ್ಛೆ ಹೂಡುವ ದ್ವಂದ್ವ..."

**ತ**ನ್ನ ಊರು, ಬೆಟ್ಟಗುಡ್ಡ, ಝರಿ... ಆ ನವಿಲು ನೃತ್ಯ ಮತ್ತೆ ಜಾನಪದ ಸೊಗಡುಗಳಲ್ಲೇ ಉಸಿರಾಡುತ್ತ ಬೆಳೆದ ಕಾಳಿದಾಸನಿಗೆ ಗೆಳತಿ ಮಲ್ಲಿಕಾಳಂತೂ ಪ್ರೇಯಸಿಯಾಗಿ, [illegible] ಅವನ ಅಭೂತಪೂರ್ವ ಕಾವ್ಯ ವ್ಯಕ್ತಿತ್ವಕ್ಕೆ ಮಹಾಸ್ಫೂರ್ತಿಯೇ ಆಗಿದ್ದಾಳೆ. ಅವನಿಗೆ ಮಲ್ಲಿಕಾಳನ್ನು ತನ್ನ ನಾಡನ್ನು ಬಿಡುವುದೆಂದರೆ ದುಃಖದಾಯಕ ಸಂಗತಿ. ಇಂತಿದ್ದರಲ್ಲಿ ಅವನಿಗೆ ರಾಜನ ಆಹ್ವಾನದ ಮೇರೆಗೆ ರಾಜದೂತರಿಂದ ರಾಜಧಾನಿ ಉಜ್ಜಯಿನಿಗೆ ಬರಲು ಕರೆ ಬರುತ್ತದೆ. ಕರೆಯ ಬಂದ ದೂತರ ಕಣ್ಣು ತಪ್ಪಿಸಿ ಅಲ್ಲಲ್ಲಿ ಅಡಗಿ ಕುಳಿತರೂ

ಮಲ್ಲಿಕಾ ಅವನಿಗೆ ಅಂತಹ ಅವಕಾಶ ತಪ್ಪಿಸಿಕೊಳ್ಳಬಾರದೆಂದೂ ಅವನು ಅರಮನೆಯಲ್ಲಿ ಬೆಳಕಾಗಬೇಕೆಂದೂ ಹರಸಿ ಕಾಳಿದಾಸನನ್ನು ತಾನೇ ಒತ್ತಾಯಿಸುತ್ತಾಳೆ, ಬೇಡಿಕೊಳ್ಳುತ್ತಾಳೆ... ಅವಳ ಈ ಪರಿಗೆ ಮಣಿದೇ ಕಾಳಿದಾಸನು ಅವಳ ಆಣತಿಯಂತೆ ಉಜ್ಜಯಿನಿ ಅರಮನೆಯ ಸೇರುತ್ತಾನೆ, ಮಲ್ಲಿಕಾಳನ್ನು ತನ್ನ ನಾಡನ್ನು ಬಿಟ್ಟು ಹೊರಡುವಾಗಿನ ಕಾಳಿದಾಸನ ವೇದನೆ ಹೇಳತೀರದು;

**"ಈ ಹಳ್ಳಿ ನಾಡಿನ ಪ್ರದೇಶವೇ ನನ್ನ ನಿಜವಾದ ನೆಲೆ.**

**ಅನೇಕ ಎಳೆಗಳು ನನ್ನನ್ನು ಈ ನೆಲದೊಂದಿಗೆ ಜೋಡಿಸಿವೆ.**

**ಆ ಎಳೆಗಳಲ್ಲಿ, ಆ ಸೂತ್ರಗಳಲ್ಲಿ ನೀನಿರುವಿ, ಈ ಆಕಾಶ,**

**ಈ ಮೋಡಗಳು, ಈ ಹಸಿರು, ಈ ಚಿಗರೆ ಮರಿಗಳಿವೆ,**

**ಈ ದನಗಾಹಿಗಳಿದ್ದಾರೆ" –**

ಎನ್ನುತ್ತಲೆ, ತಡೆದು ಮಲ್ಲಿಕಾಳತ್ತ ನೋಡಿ ಹೇಳುತ್ತಾನೆ – "ಇಲ್ಲಿಂದ ದೂರವಾದರೆ ನಾನು ನನ್ನ ನೆಲದಿಂದ ಕೊಚ್ಚಿ ಹೋಗುತ್ತೇನೆ"– ಎಂದು ಪ್ರಲಾಪಿಸುತ್ತ ಸುರಿವ ಮಳೆಯ ಆಷಾಢದಾ ದಿನ ಹೊರಟು ಬಿಟ್ಟನು...

ಆದರೆ ಬದುಕು ಬಲು ವಿಚಿತ್ರ. ಕಾಲನ ಸೆಳೆತಕ್ಕೆ ಸಿಕ್ಕು ಕಾಲ ತನ್ನ ಪ್ರವಾಹದೊಂದಿಗೆ ಕಾಳಿದಾಸನನ್ನೂ ಅವನ ಚಿತ್ತಭಿತ್ತಿಯನ್ನೂ ಭಿನ್ನ ದಿಶೆಯಲ್ಲಿ ಹರಿಸಿ ಬಿಡುತ್ತಾನೆ. ಮಲ್ಲಿಕಾಳ ಒತ್ತಾಸೆಗಾಗಿ ಉಜ್ಜಯಿನಿಗೆ ಬರುತ್ತಾನೆ. ಅಲ್ಲಿ, ಕವಿಯಾಗಿ ಮಿಂಚಿ ಮೆರೆಯುತ್ತಾನೆ... ಅರಸನ ಮುಲಾಜಿಗೆ ಕಟ್ಟು ಬಿದ್ದು ಕಾಶ್ಮೀರದ ಕನ್ಯೆಯನ್ನು ವಿವಾಹವಾಗುತ್ತಾನೆ. ಅವನ ಸ್ಮೃತಿ ಪಟಲದಲ್ಲೆಲ್ಲ ಮಲ್ಲಿಕಾ ಪ್ರಹರಿಸುತ್ತಿರುತ್ತಾಳೆ. ಆದರೆ ಅವನಿಗೆ ರಾಜಧಾನಿಯ ಐಶ್ವರ್ಯ ಕಟ್ಟಿ ಹಾಕಿದೆ, ಪಾಪ, ತನಗಾಗಿ ಕಾದು ಕುಳಿತ ಮಲ್ಲಿಕಾಳ ಪಾಡೇನು! – ತನ್ನ ನಾಡಿನಿಂದ ಉಜ್ಜಯಿನಿಗೆ ಹೋಗಿ ಬರುವ ವ್ಯಾಪಾರಿಗಳೊಡನೆ ಮಲ್ಲಿಕಾಳ ಕಾಳಿದಾಸನ ಯೋಗಕ್ಷೇಮ ವಿಚಾರ, ಕಾಳಜಿ ನಡೆದೆಯೇ ಇತ್ತು.

...ಈಗ, ಹಲವು ವರ್ಷಗಳು ಸರಿದ ಮಲ್ಲಿಕಾಳನ್ನು ಅರಸಿ ಬಂದ ಕಾಳಿದಾಸ, ಆಷಾಢದ ದಿನವೇ ಅವಳ ಮನೆಯ ಬಾಗಿಲು ತಟ್ಟಿ, ಒಳಗೆ ಬಂದ. ಅದೇ ಹಿಂದೆ ಮಲ್ಲಿಕಾಳಿಂದ ಹೊರಟು ಹೋಗಿದ್ದ ಆಷಾಢದ ಒಂದು ದಿನವೇ ಅದು! ; ಮಲ್ಲಿಕಾ ಬಸವಳಿದಿದ್ದಾಳೆ, ಆದರೆ ಕಾಳಿದಾಸನ ಆಗಮನದಿ ಖುಷಿ ಪಡುವ ಮಾತಾಡುತ್ತಾಳೆ, ಅವನೊಡನೆ ಸಂತೋಷದಿಂದ ಮಾತಿಗಿಳಿಯುತ್ತಾಳೆ. ಕಾಳಿದಾಸನು, "ಕಂಪನ ತುಂಬಿದ ಈ ಚೇತನವೂ ಬದಲಾಗಿಲ್ಲ, ಆವೇಶವನ್ನು ಜಾಗೃತಗೊಳಿಸುವ ಹೃದಯವೂ ಅದೇ ಆಗಿದೆ. ಆದರೆ..." ಎನ್ನುತ್ತ ಮಾತು ನಿಲ್ಲಿಸುತ್ತಾನೆ. ಮಲ್ಲಿಕಾ, "ಹೊಸದಾಗಿ ಜೀವನವನ್ನು ಆರಂಭಿಸಬಹುದೆಂದು ಹೇಳುತ್ತಿದ್ದಿರಿ" ಅನ್ನುತ್ತಾಳೆ. ಕಾಳಿದಾಸ ನಿಟ್ಟುಸಿರು ಬಿಟ್ಟು, ಹೇಳುತ್ತಾನೆ, "ಹೌದು, ಜೀವನವನ್ನು ಮೊದಲಿನಿಂದ ಹೊಸದಾಗಿ ಆರಂಭಿಸಬಹುದೆಂದು ಹೇಳುತ್ತಿದ್ದೆ, ಬಹುಶಃ ಇದು ಕಾಲದ ಜೊತೆಗೆ ಇಚ್ಚೆ ಹೂಡಿದ ದ್ವಂದ್ವವಾಗಿತ್ತು, ಆದರೆ ಕಾಲ, ಸಮಯ ಬಹಳ ಶಕ್ತಿಶಾಲಿಯಾಗಿದೆ" ಅನ್ನುತ್ತಾನೆ. ಮಲ್ಲಿಕಾ, ಯಾಕೆ? ಎಂದು ಪ್ರಶ್ನಿಸುತ್ತಿರುವಾಗ ಮನೆಯೊಳಗಿಂದ ಮಗು ಅಳುವ ಧ್ವನಿ ಬರುತ್ತದೆ. ಮಲ್ಲಿಕಾ ಬೆದರಿದವಳಂತೆ ಒಳಗೆ ಹೋಗುತ್ತಾಳೆ. ಕಾಳಿದಾಸ ತನಗೆ ತಾನೇ ಹೇಳಿದಂತೆ (ಸ್ವಗತ) ನುಡಿಯುತ್ತಾನೆ, "ಯಾಕೆಂದರೆ ಅದು (ಕಾಲ) ಕಾಯುವುದಿಲ್ಲ" ಎಂದು! ... ಮಿಂಚುತ್ತದೆ, ಮೋಡಗಳ ಸಪ್ಪಳ! ಮಲ್ಲಿಕಾ ಒಳಗಿಂದ ಬರುವಾಗಲೇ ಹೊರಗಿನಿಂದ ಬಾಗಿಲು ಮುಚ್ಚುತ್ತಾನೆ ಕಾಳಿದಾಸ. ಮಲ್ಲಿಕಾ ಹೊರ ಬರುತ್ತಾಳೆ,

---

ಆಷಾಢದ ಒಂದು ದಿನ (ನಾಟಕ)

ಕನ್ನಡಕ್ಕೆ : ಶ್ರೀ ಸಿದ್ದಲಿಂಗ ಪಟ್ಟಣಶೆಟ್ಟಿ, ಹಿಂದೀ ಮೂಲ : ಮೋಹನ್ ರಾಕೇಶ್

ಕಾಳಿದಾಸನನ್ನು ಕಾಣದೆ ಓಡುತ್ತ ಕಿಟಕಿಯ ಹತ್ತಿರ ಹೋಗುತ್ತಾಳೆ – "ಕಾಳಿದಾಸ! ಕಾಳಿದಾಸ...!" ಎನ್ನುತ್ತ ಹೆಜ್ಜೆ ಹೊರಗಡೆ ಹೊರಡುತ್ತವೆ. ಆದರೆ ಮಗಳನ್ನು ನೋಡಿ ಗಕ್ಕನೆ ನಿಲ್ಲುತ್ತಾಳೆ. ಮಗಳನ್ನು ಇನ್ನು ಜೋರಾಗಿ ಅಪ್ಪಿಕೊಂಡು ಆವೇಶದಿಂದ ಮುದ್ದಿಡುತ್ತಾಳೆ. ಮಿಂಚು ಒಂದೇ ಸಮನೆ ಮಿಂಚುತ್ತಿದೆ. ಮೋಡಗಳ ಗರ್ಜನೆಯೂ ಕೇಳುತ್ತಿದೆ !

– ಇದುವೇ "ಆಷಾಢದ ಒಂದು ದಿನ" ನಾಟಕ...! ಕಾಲ ನಿಲ್ಲುವುದಿಲ್ಲ... ಯಾರಿಗಾಗಿ ಕಾಯುವುದಿಲ್ಲ! ಇಲ್ಲಿ ಎಲ್ಲವೂ ಎಂದಿನಂತೆಯೆ ಇರುತ್ತದೆ, ಆದರೆ ಇಂದು ನಾವಿಟ್ಟುಕೊಳ್ಳುವ ಇಚ್ಛೆ ನಾಳೆ ಈಡೇರುವುದೆಂದಾದರೆ ಅಲ್ಪಕಾಲದಲ್ಲಿ ನಾವು ಬೆನ್ನತ್ತಿ ಗೆಲ್ಲಬಹುದಾದರೂ ಕಾಲನ ಇಚ್ಛೆ ಅವನಂತೆಯೆ ಆಗಿದ್ದರೆ?! ಕಾಳಿದಾಸ ಮಲ್ಲಿಕಾಳನ್ನು ತೊರೆದು ಉಜ್ಜಯಿನಿಗೆ ಹೋಗುತ್ತಾನೆ, ಅರಮನೆಯ ಬಿರುದು, ಐಶ್ವರ್ಯ ಅವನನ್ನು ಕಟ್ಟಿ ಹಾಕುತ್ತದೆ! ತಿರುಗಿ ಬರುತ್ತಾನೆ, ಆದರೆ ಎಂದೊ! ಅಕಾಲಕ್ಕೆ! ಅವನಿಚ್ಛೆಯಂತೆ ಮತ್ತೆ ಮೊದಲಿನಂತೆ ಬದುಕಬಹುದು, ಆದರೇನು? – ಕಾಲ ಶಕ್ತಿಶಾಲಿಯಾಗಿದೆ, ಯಾಕೆಂದರೆ ಕಾಳಿದಾಸನ ಕೈ ಹಿಡಿದ ಕಾಶ್ಮೀರಿ ಕನ್ಯೆ! ಇತ್ತ ಮಲ್ಲಿಕಾಳ ಬದುಕೂ ಹಿಂದಿನಂತಿಲ್ಲವಲ್ಲ, ಬೇರೆಯವನೊಡನೆ ಲಗ್ನವಾಗಿ ಆಗಲೇ ಕೂಸು ಆಗಿ ಹೋಗಿದೆ... ಇದೀಗ ಮಗು ಅತ್ತು ಕರೆದು ಎಚ್ಚರಿಸಿದೆ, ನಿಲ್ಲಿಸಿದೆ – ಅಮ್ಮ ಒಳಗೆ ಬಾ...! ಹೊರಗೆ ಹೋದರೆ ಕಾಳಿದಾಸನೂ ಇಲ್ಲ ಅಲ್ಲಿ...! ಎಂತಹ ಆಷಾಢ ಅದು.

ಅಂತೂ ಕಾಲ ಕಾಯುವುದಿಲ್ಲ, ಹಾಗೇ ಬಂಧನಗಳ ಬಂಧಿಸಿಯೂ ಅನಂತ ತನಕ ಬಂಧಿಸಿಯೆ ಇಟ್ಟು, ಸುಖವಾಗಿಡುವುದಿಲ್ಲ; ಇಹದ ಬಂಧನಗಳಿಗೆ ಕಾಲನು ತನ್ನ ಆಣತಿ ನೀಡಬೇಕಾಗಿ ಬಂದಾಗ ಮಾತ್ರ ಬದಲಾಯಿಸಬಲ್ಲನೊ? ಆದರೆ ಜಗತ್ತು, ಕಾಲನಿಗೂ ಕಠಿಣವಾಗಿದೆಯಲ್ಲ ಜಗತ್ತು? – ಹಾಗಾಗಿರದಿದ್ದರೆ ಅರಸನ ಮುಲಾಜಿಗಾಗಿ ಕಾಳಿದಾಸನೇಕೆ ಅನ್ಯಳನ್ನು ಲಗ್ನವಾಗುತ್ತಿದ್ದ, ಅದಿರಲಿ. ಮಲ್ಲಿಕಾಳಾದರೂ ಬೇರೆಯವನನ್ನು ಮದುವೆ ಆಗುತ್ತಲೇ ಇರಲಿಲ್ಲ, ಇದೀಗ ಮತ್ತೆ ಕಾಳಿದಾಸನ ಬೆನ್ನತ್ತಿ ಹೋಗಬಹುದಿತ್ತಾದರೂ ಅತ್ತು ಕರೆದು ತಡೆದ ಆ ಮಗು ಕೂಡಾ ಹುಟ್ಟಿರುತ್ತಿರಲಿಲ್ಲ... ಅಬ್ಬಾ, ಅಡಚಣೆ ಎಲ್ಲೆಡೆ ಹಾಗೇ ಬರುತ್ತದೆ – ಮತ್ತೇನೆಂದರೆ, ಹೊರಗೆ ಮಳೆಯೂ ಆ ಪರಿ ಸುರಿಯುತ್ತಿದೆಯಲ್ಲ?!

**<u>ಅಡಿ ಟಿಪ್ಪಣಿ</u> :**

... ಬದುಕಿನಲ್ಲಿ ಕಡು ಬಡತನ, ಅನೇಕ ಅನಾದರಗಳನ್ನು ಕಂಡ ಮೋಹನ್ ರಾಕೇಶ್ ಹಿಂದೀ ಭಾಷೆ ಸಾಹಿತ್ಯಕ್ಕೆ ಹೊಸ ಆಯಾಮ ಕೊಟ್ಟವರು. ಬದುಕಿನಲ್ಲಿ ನೆಲೆ ಕಾಣದೆ ಅಲೆದ ರಾಕೇಶ್, ಕಾಲೇಜ್‌ನಲ್ಲಿ ಪತ್ರಿಕೆಗಳಲ್ಲಿ ದುಡಿದರು. ಎಲ್ಲೂ ಸಮಾಧಾನ ಸಿಗದೆ ನೊಂದವರು. ಶಾಂತಿ ಇಲ್ಲದೆ ಆಂತರಿಕವಾಗಿ ಶೂನ್ಯತೆಯೇ ಅವರನ್ನು ಆಳುತ್ತಿತ್ತು... ಹೆಣ್ಣು ಮಕ್ಕಳೊಡನೆ ಬೆರೆತು ಅಷ್ಟೇ ಶೀಘ್ರದಲ್ಲಿ ಅಗಲುತ್ತಲೇ ಇದ್ದ ಅವರ ಜೀವನ ಘಟನಾವಳಿಗಳ ಛಾಪು ಅವರ ನಾಟಕ ಪಾತ್ರಗಳಲ್ಲಿ ಅಚ್ಚೊತ್ತಿವೆ... ಅವರ ತೀರಾ ಸ್ವಂತಃ ವ್ಯಕ್ತಿತ್ವದ ಛಾಪುಗಳನ್ನೊಳಗೊಂಡ ನಾಟಕಗಳಲ್ಲಿ "ಆಧೇ ಅಧೂರೇ (ಅಪೂರ್ಣದ)", "ಅಲೆಗಳಲ್ಲಿ ರಾಜ ಹಂಸಗಳು" ಮತ್ತು "ಆಷಾಢದ ಒಂದು ದಿನ" – ಈ ಮೂರು ಕೃತಿಗಳು ಬಹಳ ಮಹತ್ವದವು... ಅಂದ ಹಾಗೆ ಅನುವಾದಕಾರರು ನಮ್ಮ ಪ್ರಿಯ ಲೇಖಕರಾದ ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿಯವರು. ಈ ಪುಸ್ತಕದ ಮುನ್ನುಡಿ, ನಾಂದೀಸ್ವರದಲ್ಲಿ ತಾವೇ ಹೇಳಿದ ಈ ಕುರಿತ ಒಂದು ಅಭಿಪ್ರಾಯ ನೀಡುವುದರೊಂದಿಗೆ ನಾನು ಓದಿದ ಈ ಪುಸ್ತಕದ ಈ ಪ್ರಸ್ತಾವನೆ ಮುಗಿಸುತ್ತೇನೆ – "ಆಷಾಢದ ಒಂದು ದಿನದಲ್ಲಿ ಬರುವ ಕಾಳಿದಾಸನ ವೇದನೆ, ಮಲ್ಲಿಕಾಳ ದುರಂತ ಎರಡೂ ರಾಕೇಶ್ ಅನುಭವಿಸಿದ, ಭೋಗಿಸಿದ ನೋವುಗಳೇ. ಇತಿಹಾಸ ಅಥವಾ ಕಲ್ಪನೆಗಿಂತ ಕಾಳಿದಾಸನ ಕೃತಿಗಳಲ್ಲಿ ಬಯಲಾಗುವ ಅವನ ವ್ಯಕ್ತಿತ್ವವನ್ನು ಬಿಂಬಿಸಿದ ಈ ನಾಟಕದಲ್ಲಿ ರಾಕೇಶ್ ತಮ್ಮ ವ್ಯಕ್ತಿತ್ವದ ಪ್ರತಿಬಿಂಬವನ್ನೇ ಮೂಡಿಸಿದ್ದಾರೆ."

# ಯಾ ಅಲ್ಲಾಹ್ ಭಜರೇ ಗೋವಿಂದಾ

- ರಾಮಲಿಂಗಪ್ಪ ಟಿ. ಬೇಗೂರು

೧



ಜಗವು ಮೈಮುರಿಯುತ್ತ
ಹೊರಳಿಕೊಳ್ಳುವ ಹೊತ್ತು
ರಪ್ಪರಪ್ಪನೆ ಕಿವಿಯ ಮೇಲಪ್ಪಳಿಸುತ್ತವೆ
ಅಲ್ಲ ಅಲ್ಲಾಹ್... ಗೋವಿಂದ ಗೋವಿಂದಾ



ಏಳತೊಡಗುವ ಮೊದಲೇ
ನೆಲಕ್ಕೆ ನೆಲವೇ ಎದ್ದು ನಾಯಾಗಿ
ನೂರು ಗಂಟಲ ಚಾಚಿ ಹೋ... ಎಂದು ಅರಚಿದಂತಾಗಿ
ಮೆಟ್ಟಿ ಬೀಳುತ್ತದೆ ಕೋಳಿಜಾವ
ಭಜನೆಯೋ ಪ್ರಾರ್ಥನೆಯೋ
ತಿಳಿಯದೆ ಕಕಮಕ ಹಿಡಿದು ನಡುಗುತ್ತದೆ ಜೀವಾಜೀವ

ದನಿ ಮಾಯಾವಿಯೇ ಗಾಳಿಮಯ್ಯಾಗಿ ತೇಲಿ
ಪ್ರತಿ ಮುಂಜಾವನೂ ಅಡರಿ ಬ್ರಹ್ಮರಕ್ಕಸನಾಗಿ
ಬ್ರಹ್ಮಾಂಡ ಗಿಲಕಿಗೆ ಪಿಂಡಾಂಡ ಜಲ್ಲಿ ಹಾಕಿ
ಅಲ್ಲಾಡಿಸುತ್ತ ಕಲ್ಲಾಡಿಸುತ್ತ
ಹೀಗೇ ಆಗು ಹಾಗೇ ಆಗೆಂದು, ಇಲ್ಲದಿರೆ ಸಾವು ಖಂಡಿತವೆಂದು
ಗದರಿ ಗದರಿ ಗೂಕಿಕ್ಕಿ

ಕೂಗುಮಾರಿಯೇ ಬಾಯಾರಿ ಹೆದರಿ
ನಡ ನಡ ನಡುಗಿ ನಡೆಯೇ ತಿಳಿಯದೆ ತತ್ತರಿಸುತ್ತ ಮುಂಜಾವ
ಮೂರ್ಛೆಯಲಿ ತೇಲಿ ಮುಳುಗೇಳುತ್ತದೆ ಜೀವಾಜೀವ

೨

ಇಲ್ಲಿಲ್ಲ ಅಲ್ಲಾಹ್ ಎಲ್ಲ ಗೋವಿಂದಾ
ಹಾರೆ ಗುದ್ದಲಿ ಏಟು ಕಿವಿಗೆ ಬಿದ್ದಂತೆ
ಮೋರೆ ಮೋರೆಗಳಲ್ಲು ಚೂರು ಪಾರುಗಳಲ್ಲು
ಚಂದ್ರಕೊಕ್ಕೆಯ ಮೇಲೆ ಇಂದ್ರಲೋಕ.
ಬೆಳಕು ಹರಿಯುವ ವೇಳೆ
ಕಣ್ಣು ಕತ್ತಲು ಬಂದು ಯಾರು ಯಾರವರೊ?


ಕಲೆ: ಅಜ್ಜಿಪುರ

ದನಿಗೆ ದನಿಗೂಡಿ ಮಾಡುಗಳೂ ಆಡಿ
ಸೈಕಲ್ಲು-ಶಾಲೆಯ ಬೆಲ್ಲು, ಕಾರಖಾನೆಯ ಸೈರನ್ನು
ಬಸ್ಸು, ರೈಲಿನ ಹಾರನ್ನು, ಇನಿದಾದ ಹಾಡು, ಗಾಳಿಯ ಸುಯ್ಲು

ಸಕಲವೂ ಮೈದುಂಬಿ ನೆಲಪೂರ ಗಡಿಯಾರ
ಅಲ್ಲಾ ಕೂಗಿದ ಹಾಗೆ ಭಜನೆ ಮಾಡಿದ ಹಾಗೆ
ಗಂಟಲಾರದು, ಗಂಟಲಾರದು ಯಾರ ಗಂಟಲಾರದೊ?

ಕಿವಿಗವಿಯೇ ಹೆಬ್ಬಾಗಿಲು ಮನಸಿಂಹಾಸನಕೆ
ಹನಿಗಣೆಯೇ ಬಿತುಬೀಜವು ಎದೆಯೋನಿಗೆ
ಪದಪದಕೂ ಕಲಹ ಕೇಳಿ ರಕ್ಕಸ ಬೆಳೆ ಬೆಳೆಯಿತೊ
ನೆಲದ ಕಿವಿ ಪೋಟಾಗದೆ ಇನ್ನು ಉಳಿಯದೊ

ಇರುಳ ನಿದ್ದೆಯೂ ಹಾರಿ, ಹಗಲ ಎಚ್ಚರವೂ ಬೆಚ್ಚಿ
ದನಿಗಿಲಕಿ ಸುತ್ತಲೂ ವದರಿ ಕಯ್ಯಿ ಮಯ್ಯಿಗೆ ತೊಡರಿ
ರಕ್ಕಸ ಬಿತ್ತರಿಸುತ್ತ ಹೋದಂತೆ ಎಲ್ಲವೂ ಎರಡಾಗಿ
ದನಿ ದನಿಗೆ ಕುಲಬಲ ಕೂಡಿ ಅತಿಯಾಚಾರವೇ ಮತಿಗತಿಯಾಗಿ
ಪ್ರಾಣವೇ ತಲ್ಲಣಿಸಿ ಮೇಲೆ ಶಿಲುಬೆಯೇರಿದ ಹಾಗೆ
ಏಸು ದಿನವೀ ನಾಟ್ಯ! ಆಮೇನ್ ಆಮೇನು ಆಮೇಲಿನ್ನೇನೊ! . . . . .

ಟೈಮು ಟೈಮಿಕ್ಕಿದ ಕೇಡಿನ ಕಣಿ ಕೇಳುತ್ತ
ಮಗ್ಗಲು ತೋಚದೆ ದಿಗ್ಗನೆ ಏಳುತ್ತದೆ
ಕೂಗಿಕ್ಕುತ್ತದೆ ಜಗಜ್ಜೀವ
**ಯಾ ಅಲ್ಲಾಹ್ ಭಜರೇ ಗೋವಿಂದಾ**
**ಮುಕುತಿಯು ಎಂದಿಗೋ ನಿಮ್ಮಿಂದಾ**

---

ಎರಡು ಹನಿಗಳು :

## ಗಂಡಸು

ಪ್ರೀತಿಸುತ್ತಾನೆ
ನಗಿಸುತ್ತಾನೆ
ನಲಿಸುತ್ತಾನೆ
ರೆಕ್ಕೆಗಳಿಲ್ಲದೆ
ಗಗನದಲ್ಲಿ
ಹಾರಲು ಕಲಿಸುತ್ತಾನೆ
ಮರೆಯಲಾರದ
ಉಡುಗೊರೆಯಿತ್ತು
ಮಾಯವಾಗುತ್ತಾನೆ
ಯಾಕೆಂದರೆ ಅವ
ಗಂಡಸು !



## ಆಸೆ

ಕೋಟಿ ಕನಸುಗಳ
ಮೂಟೆ ಹೊತ್ತು
ಕತ್ತಲಲ್ಲಿ ಬಿಕ್ಕುವಾಗ
ನೂರಾರು ದೀಪ
ಬೆಳಗಿ ದಾರಿ
ತೋರಿದ ಧೀರ.
ಕುರುಡನಂತೆ
ಅಲೆಯುವುದಾ
ಕಂಡು ಕನ್ನಡಕಾ
ಕೊಡಿಸುವಾಸೆ

ಕಮಲಾ ಮೂರ್ತಿ

# ನಾನೇನು ಒಂಟಿ ಅಲ್ಲ

- ಶ್ರೀಮತಿ ಗಂಗಾ ಸ್ವಾಮಿ

೧

ಮೈಥಿಲಿಯ ಎದೆಯ ಮೇಲೆ
ಶಿಲ್ಪಿ ಕೆತ್ತುತ್ತಿದ್ದ ಹಚ್ಚೆ
ಇದು ರಾವಣನದೋ
ಇಲ್ಲಾ ರಾಮನದೋ
ಅಸ್ಪಷ್ಟ ಕಾಲ
ಬಸುರಿ ಸೀತೆ ಮಾತ್ರ ಕಾಡಿನಲಿ
ಇದು ರಾಮಾಯಣ

೨

ರಾಮಲಕ್ಷ್ಮಣರು ಕಟ್ಟಿದ್ದ
ಹದಿಮೂರು ವರ್ಷಗಳ ನಂಬಿಕೆಯ ಪಂಚವಟಿ
ಮುರಿದು ಬೀಳಲು
ನೆಪ ಅಗಸ
ಅರಮನೆ ಒಳಮನೆಗಳಲ್ಲಿ
ಹಚ್ಚೆ ಬೆಳೆಯುತ್ತಾ ಹೋದಾಗ, ಬಸಿರು ಭಾರವಾಗಿ
ನಡೆದೇ ಬಿಟ್ಟಳು ಸೀತೆ ಏಕಾಂಗಿಯಾಗಿ ಕಾಡಿನತ್ತ

೩

ಅಂದು, ಅಶೋಕವನದ ಏಕಾಂಗಿತನದಲ್ಲು
ರಾಮನ ನೆನಪುಗಳು ರಾಶಿ ರಾಶಿ
ಬರಲಿಲ್ಲ ರಾವಣ ನನ್ನ ಆಜೂಬಾಜೂ
ಇಂದು, ಮರ್ಯಾದೆಯ ಪುರುಷೋತ್ತಮನಿದ್ದ
ಅಯೋಧ್ಯೆಯ ಅರಮನೆಯಲ್ಲಿ - ಒಳಮನದಲ್ಲಿ
ರಾವಣ ಮಾತ್ರ ಜೀವಂತ
ಹಚ್ಚೆ ಮಚ್ಚೆಯ ಕಥೆ ಅಡುಗೂಲಜ್ಜಿ ಕಥೆಯೇ?

೪

ಹಚ್ಚೆ
ಎದೆಯ ಮೇಲೋ ಎದೆಯಾಳದಲ್ಲೋ?
'ಸದ್ಯ! ದೇವರಿಲ್ಲದ ಗರ್ಭಗುಡಿಯಲ್ಲಿ
ನನಗೆ ಇರಲೇಬೇಕೆಂಬ ಹಟವಿಲ್ಲ'.
ನನ್ನೆದುರು ಎಷ್ಟೊಂದು ಗಿಡಮರಗಳು
ಆಕಾಶದ ತುಂಬ ನಕ್ಷತ್ರಗಳು
'ನಾನೇನು ಒಂಟಿ ಅಲ್ಲ!'.

# ಆಯ್ಕೆ

- ಕಮಲಾ ಮೂರ್ತಿ

ಹೇಳಮ್ಮ ನಿನಗೇನು ಬೇಕು?
ವಿದೇಶದ ನೆಲದಲ್ಲಿ
ಝಗಮಗಿಸುವ ಬೆಳಕು ನೆರಳಿನ
ಕಣ್ಣಾ ಮುಚ್ಚಾಲೆಯಲ್ಲಿ
ಮುದ್ದಾದ ತುಟಿ ಬಿರುಕಿಸಿದಳು ಮಗಳು
ಗ ಲಿ ಬಿ ಲಿ ಯೊಡನೆ
ಸಂಕೋಚದ ಮುದ್ದೆಯಾದೆ
ಅಭಿಪ್ರಾಯ ತೆರೆದಿಟ್ಟ ಕ್ಷಣ
ನೆನಪಾಗುತ್ತಿಲ್ಲ
ಇಲ್ಲಿ ಎಲ್ಲಕ್ಕು ಇದೆ ಆಯ್ಕೆ
ಆಯ್ದುಕೊಳ್ಳುವುದಕ್ಕು ಇದೆ
ಸಹಸ್ರ ಸಹಸ್ರ ಬಗೆ ಬಣ್ಣ
ನನಗಾದರು ಏನಿತ್ತು ಅಲ್ಲಿ
ಅಪ್ಪ ಒಪ್ಪಿ ನನಗು ಮದುವೆ
ಎಂದಾಗಲೇ ನೂರು ಮಾತುಗಳು
ತುಟಿಗೆ ಬಾರದೆ ಎದೆಯ
ಕೆಸರ ಮಡುವಿನಲ್ಲಿ ಹೂತಿದ್ದವು
ಬರಿಗೊರಳಿಗೆ ಚಿನ್ನದ
ತಾಳಿ ತೊಡಸಿದನೆಂದು
ಮೌನ ಹೊದ್ದವು ಬಯಕೆಗಳು
ಎಳೆ ಕಂದಮ್ಮಗಳ ಕಣ್ಣ ಹೊಳಪಲ್ಲಿ
ದಣಿದ ರವಿಯ ಕೆಂಪಿನೋಕುಳಿಯಲ್ಲಿ
ಕಳೆದು ಹೋದವು ಕನಸುಗಳು
ಇದ್ದರೂ ಆಯ್ಕೆಯ ಹಕ್ಕು
ಜೀವವಿರಲಿಲ್ಲ ಎದೆಯ ದನಿಯಲ್ಲಿ
ಅಭಿಪ್ರಾಯ ಮಂಡಿಸಲೇಬೇಕೀಗ
ಉಪ್ಪು, ಖಾರ, ಹುಳಿ, ಸಿಹಿ
ಹೆಚ್ಚೆರದ ಖಾದ್ಯವಿದ್ದರೆ
ಹೇಳು ಮಗಳೇ
ಹೊಟ್ಟೆ ತುಂಬಿಸಲು ಬೇಕಷ್ಟೆ
ದನಿ ಎತ್ತಲಲ್ಲವಾದರೂ
ಉಸಿರಾಡಲು ತಿನ್ನಲೇಬೇಕು!

# ಪ್ರಶ್ನೆಗಳು

- ಜ.ನಾ. ತೇಜಶ್ರೀ

ದಿನವೂ ಸಂಜೆ
ರೊಯ್ಯನೆ ನೆತ್ತಿ ಮೇಲೆ
ಸವರಿದಂತೆ ಹಾರಿಹೋಗುವ
ಗಿಳಿಗಳ ಹಿಂಡು
ಅದೊಂದು ದಿನ
ಬಲಿತಿರದ ಪುಕ್ಕವ
ತಾರಸಿಯ ಮೇಲೆ
ಉದುರಿಸಿ ಹೋಗಿದ್ದವು.

ಬಗೆದಷ್ಟು ನಿಗೂಢವಾಗುವ
ಈ ವಿಸ್ಮಯ ಜಗತ್ತ
ಸಾಧ್ಯವಾದರೆ ಈ ಪುಕ್ಕದಿಂದ
ಮತ್ತೆ ಅರಿಯಲೆತ್ನಿಸು
ಎನ್ನುವಂತಿತ್ತು - ಆ ಪುಕ್ಕದೆಳೆಗಳು.

ಒಂದೆಳೆಯ ಚಂದಿರ ತುಂಬುದುಟಿಗಳ
ತೆರೆದು - ನನ್ನ ನೋಡಿ ನಕ್ಕಂತಾಯಿತು.

ದೂರದಲ್ಲೆಲ್ಲೋ...
ಗಡಚಿಕ್ಕುವ ಗಿಳಿಗಳ ಕಲರವ
ದ್ವಿಗುಣಗೊಳಿಸುತ್ತಿತ್ತು ಕ್ಷಣಕೂ
ಆಶ್ಚರ್ಯಗಳ; ತನ್ಮೂಲಕ ಪ್ರಶ್ನೆಗಳ.

ಬಲಿಯುವ ರೆಕ್ಕೆಯ
ಲಯಕ್ಕೆ
ಲೀನವಾಗುವ ಪುಕ್ಕಗಳ
ಸಮಚಿತ್ತತೆ-ಯ
ಅರಗಿಸಿಕೊಳ್ಳಲು ಸ್ಥೈರ್ಯ ಬೇಕು.

ಜೀವನಕೆಂದೂ ಕೊನೆಯಿಲ್ಲ;
ಹೊಸರೂಪ, ಹೊಸಹಾದಿ
ಪಡೆವ ಬದುಕು
ಬದಲಾಗಬಹುದು;
ಅಂತ್ಯವಾಗದು.

## ಮರಳಿ ಬಂದೆ

- ಪದ್ಮ ಟಿ.

ಸುತ್ತಿ ಸುತ್ತಿ ದಣಿದೆ
ಅಲೆದಲೆದು ಬಂದೆ
ನಿನ್ನ ಪ್ರೀತಿಯ ತೆಕ್ಕೆಗೆ

ಎಲ್ಲೋ ಏನೋ ಇರುವುದೆಂದು
ಅಮೃತವನ್ನೇ ಕೊಡುವೆಯೆಂದು
ಎಲ್ಲಾ ಮರೆತು ಹಾರಿದೆ
ನಿನ್ನ ಪ್ರೀತಿಯ ಒಲುಮೆಗೆ

ನಿನ್ನೆಯ ಕಹಿ ಬದುಕಿನ ವಿಷವರ್ತುಲದಲ್ಲಿ
ನೊಂದು ಬೆಂದು ತೊಳಲಾಡಿದೆ
ಬಾಳಿನೆಲ್ಲಾ ಹಾದಿಯೂ
ಕತ್ತಲಾಗಿ ಮುಚ್ಚಿದಾಗ
ಅಮೃತವೆಂಬ ಬೋಗುಣಿ ಕಂಡೆ
ಆದರೂ ನಿನ್ನ ಕೇಡ ತೋಳ
ಬಂಧಿಯಾದೆ

ಕೊನೆಗೊಮ್ಮೆ ನನ್ನ ನಾನೇ ನೋಡಿಕೊಂಡೆ
ಆತ್ಮಕ್ಕೆ ಪ್ರಶ್ನೆಯ ಗಾಳ ಎಸೆದೆ
ಮಿಂಚುವ ಕಣ್ಣಲ್ಲಿತ್ತು ಜೀವ-ಸಂಜೀವಿನಿ
ಕತ್ತಲ ಜಗದಲ್ಲಿತ್ತು
ಆರದಿರುವ ಜ್ಯೋತಿ
ನೀ ಬಂದು ಕೈಹಿಡಿದೆ;
ಮರಳಿ ಬಂದೆ
ನಿನ್ನ ತೋಳ ತೆಕ್ಕೆಗೆ



## ಜೀವ ಕುಲುಮೆ*

- ವಾಸುದೇವ ನಾಡಿಗ್

ವೈರುಧ್ಯಗಳ ಮಧ್ಯೆಯೇ
ಕುದುರತ್ತದೆ ಸಂಬಂಧ

ಮಣ್ಣೊಡಲೊಳಗಿನ ಬೀಜ
ಮುಗಿಲಲ್ಲೋಡಾಡುವ ನೀರು
ನೆಲದೆಡೆಗೆ ತೆನೆ ಮೂಡಿ
ಕರುಳು ಕುರುಳಿಗೆ ರಕ್ತ ಚಲನೆ

ಕಚ್ಚಾ ಕಬ್ಬಿಣದ ತುಂಡು
ಕುಲುಮೆ ತುಟಿ ಈಚೆ ಕೆಂಡ
ತಿದಿಯೊತ್ತುವ ಉಸಿರೊಳಗೂ
ಗಾಳಿಯೊಲುಮೆ ರೂಪು ರಚನೆ

ಆಗಸದ ಹದ್ದಿನೊಳಗೆ
ನೆಲಹಾವು ಕಪ್ಪೆಯ ಜೀವ
ಗಿರಿ ಬದುಕಿನಲಿ ಸರಿವ ಧುನಿ
ಸಾಗರದಲೆಗಳಿಗೆ ದನಿ

ರೇತಸ್ಸನ್ನಾಲಂಗಿಸುವ ಗರ್ಭ
ಕಣ್ಣಂಗಳಕೆ ದಕ್ಕದ ಕಣ
ಕಣಕಣವೂ ಕೂಡಿ ತೂಕವಾಗಿ
ಅಳತೆಗೂ ಮೀರಿದ ದೇಹ

ಕಾಯಿಸಿ ಆಕಾರಕ್ಕೊದಗಿಸುವಿಕೆ
ಜೀವ ಕುಲುಮೆಯ ಪರಿವೆ
ಗಾಳಿ ಬೆಂಕಿಯ ಸಖ್ಯ ಕೊನೆಗೆ
ಕೆಂಪಾದ ಒಡಲಿಗಿದೆ ನೀರ ಚಿಲುಮೆ

ವೈರುಧ್ಯಗಳ ಮಧ್ಯೆಯೇ
ಅರಳುತ್ತದೆ ಜೀವಬಂಧ.

* ಹೊಸ್ತಿಲು ಹಿಮಾಲಯುದ ಮಧ್ಯೆ - ಕವನ ಸಂಕಲನದಿಂದ

# ಬಾಡಬಾಲೆ

- ಹಾಲ್ಕುರಿಕೆ ಶಿವಶಂಕರ್

ನರಕ ಸೂತಕದೊಳಗೆ
ಬಾಡಬಾಲೆಗೊಂದು
ಹಗಲ ಹಕ್ಕಿ ಕನಸು.

ಕರಿನೀರ ಇರುಳಲ್ಲಿ
ಬಿಳಿಮೋಡ ಮೈ ಅರಳಿ
ನೆಲ ತಳದ ಒಡಲಳಲ
ಬಗೆಮಾಡಿ ನವೆ ಕೆನೆದು
ಉಪ್ಪರಿಗೆ ಕೊನೆಯಲಿ
ತುಂಡರಿದ ನಿತ್ರಾಣ
ಜಗವ ಬಗೆಮಾಡಿ
ಹರಿದಿತ್ತು ತಳದುರಿಯ.

ಚಾವಟಿ ಸದ್ದಲ್ಲಿ
ತುಪ್ಪದ ಉರಿ ತಾಗಿ
ಬೆಣ್ಣೆ ಮಾಂಸದ ಮುದ್ದೆ
ಕರ ಕರಗಿ ಜಿನುಗಿತ್ತು.

ಹರಿಗೋಲ ಬಯಲಲ್ಲಿ
ರಾಶಿ ಕಣಜವ ತುಂಬಿ
ತುಂತುರ ಮಳೆ ಹನಿಯ
ಬಿಳಿಮೋಡ ಸರಿದಿತ್ತು.

ಹಗಲ ಬಯಲಲ್ಲಿ
ಕುಂಟುಸಿರ ತಿಳಿಬಾನು
ಹೊಗೆಯಾಗಿ ಕಪ್ಪಾಗಿ
ಇರುಳು ಯಳವನ ನಾಡಿ.

ಉಸಿರೊಡೆದು ಹಗಲಾಗಿ
ಉಪ್ಪರಿಗೆ ಅಲುಗಾಡಿ
ಕರಿ ಕಲ್ಲು ಬೆಳೆದಿತ್ತು
ಬೇಲಿ ಆಗಸದೊಳಗೆ.

ಗಾಳಿ ಅಲೆಗಳು ತೇಗಿ
ಕೆಂದೂಳು ಮಡುವಾಗಿ





ಅರಕು ತೂತೊಳಗೆ
ಮುತ್ತೊಡವೆ ದನಿ ತಾಳಿ
ಒಡಲ ಸೀಳಿ ಬೆಳೆದಿತ್ತು
ಕರಿಮಣಿಯ ಮಡಿಲಲ್ಲಿ.

ದಿಕ್ಕು ದಣಿವನು ಹೇಗಿ
ಅತ್ತು ಕರೆದಿತ್ತು.
ಕೆಚ್ಚಲ ತಿಳಿಹಾಲ
ಹೊತ್ತು ಮಾಗಿದ ಹೊತ್ತು
ಹೆಪ್ಪೊಡೆದು ಅಡರಿತ್ತು
ರೆಪ್ಪೆ ತೆರೆದಿತ್ತು,
ಕಣ್ಣ ಗುಡ್ಡದ ಅಡವಿ ನಾತದೊಳಗೆ.

ಸುಕ್ಕುಗಟ್ಟಿದ ಕಡಲಿನಲಿ
ಎಷ್ಟೊಂದು ಮುಖ ಮುದ್ರೆ
ಹತ್ತಿ ತುಳಿದವರೆಲ್ಲ
ಉಂಡು ಕೊಂಡವರೆಲ್ಲ
ತೂತು ತಗಡಿನ ಒಳಗೆ
ತೂರಿ ಬಂದವರೆಲ್ಲ
ಮಣ್ಣ ಮಡಿಕೆಯಲಿ
ಚಿಗುರಿ ಬೆಂದವರೆಲ್ಲ.

ಹೊತ್ತುರಿಯ ನೆತ್ತಿಯಲಿ
ಸೂರ್ಯ ಚಂದ್ರರ ಸಾವು
ಚುಕ್ಕಿಗಳ ವಲಸೆಯಲಿ
ಕಡಲೊದರಿ ಮಲಗಿತ್ತು.

ಜಗದ ನಿದ್ದೆಯಲಿ
ಕಾಲ ನಡಿಗೆಯ ಕಡಿದು
ಜಲ ಜೀವ ಸೊಕ್ಕಿತ್ತು
ಕನಸೊಳಗೆ ಹಗಲ ಹಕ್ಕಿ ಕಂಡು
ಬಾಡಬಾಲೆ ಮೈ ನೆರದಿತ್ತು.

# ಮೂರು ವಚನಗಳು

- ಪ್ರೊ. ಓ.ಎಲ್. ನಾಗಭೂಷಣಸ್ವಾಮಿ



ಕಲೆ : ಎಂ.ಎಸ್. ಮೂರ್ತಿ

ವಚನಗಳಿಗೆ ಒಂದೇ ಅರ್ಥ ಎಂಬುದಿಲ್ಲ. ಓದುಗರ ಮನಸ್ಥಿತಿಗೆ, ಹಿನ್ನೆಲೆಗೆ ತಕ್ಕಂತೆ ಅರ್ಥಗಳು ಅನಾವರಣಗೊಳ್ಳುತ್ತವೆ. ಕೆಲವು ಬಸವ ವಚನಗಳನ್ನು ಓದಿದಾಗ ಹೊಳೆದ ಅರ್ಥಗಳನ್ನು ಈ ಬಾರಿ ನಿಮ್ಮೊಡನೆ ಹಂಚಿಕೊಳ್ಳಲು ಬಯಸಿದ್ದೇನೆ. ಹಂಚಿಕೊಳ್ಳುವುದು ಮಾತ್ರ ಉದ್ದೇಶವೇ ಹೊರತು ವಚನಗಳ ಅರ್ಥ ಇದೇ ಎಂಬ ಹಟ ಇಲ್ಲಿಲ್ಲ. ಹೀಗೂ ಅರ್ಥಮಾಡಿಕೊಳ್ಳಬಹುದಲ್ಲವೇ ಎಂಬ ಕುತೂಹಲ, ಅಚ್ಚರಿಗಳು ಮಾತ್ರವೇ ಈ ಬರಹದ ಪ್ರೇರಣೆ.

### ಪಾತ್ರೆ ಮತ್ತು ಕನ್ನಡಿ

*ದರ್ಪಣವು ಬೇರೆ ಕಂಚಲ್ಲ, ಬಟ್ಟಲು ಬೇರೆ ಕಂಚಲ್ಲ*
*ಭಾಂಡ ಒಂದೇ ಭಾಜನ ಬೇರೆ, ಬೆಳಗೆ ಕನ್ನಡಿ ಎನ್ನಿಸಿತಯ್ಯಾ*
*ಅರಿದಡೆ ಶರಣನು, ಮರೆದಡೆ ಮಾನವ*
*ಮರೆಯದೆ ಪೂಜಿಸು ಕೂಡಲ ಸಂಗಮದೇವನ*

ಸಾಮಾನ್ಯ ಮನುಷ್ಯನಿಗೂ ಶರಣನಿಗೂ ಇರುವ ವ್ಯತ್ಯಾಸವನ್ನು ಈ ವಚನ ವಿವರಿಸುತ್ತದೆ. ಶರಣ ಕನ್ನಡಿ, ಮಾನವ ಬಟ್ಟಲು. ಇಬ್ಬರಿಗೂ ಮೂಲಭೂತ ವ್ಯತ್ಯಾಸವೇನೂ ಇಲ್ಲ. ಒಂದೇ ದ್ರವ್ಯದಿಂದ ಆದವರು. ಆದರೆ ಗುಣದಲ್ಲಿ ವ್ಯತ್ಯಾಸವಿದೆ. ಕನ್ನಡಿಗೆ ತನ್ನದೇ ಆದ ಇಂಥದೇ ಎಂಬ ವ್ಯಕ್ತಿತ್ವವಿಲ್ಲ. ತನ್ನೆದುರಿಗೆ ಇರುವುದನ್ನು ಸುಮ್ಮನೆ ಪ್ರತಿಫಲಿಸುತ್ತದೆ. ಬಟ್ಟಲಿಗೆ ಸಂಗ್ರಹದ ಗುಣ, ಹಿಡಿದಿಟ್ಟುಕೊಳ್ಳುವ ಗುಣ ಇದೆ. ಶರಣ ಇರುವ ವಾಸ್ತವವನ್ನು ಅದು ಇರುವಂತೆಯೇ ತೋರುವಾತ, ತನಗೆಂದು ಏನನ್ನೂ ಇಟ್ಟುಕೊಳ್ಳದಾತ. ಮಾನವ ಇರುವುದನ್ನು ತನ್ನೊಳಗೆ ಕೂಡಿಟ್ಟುಕೊಳ್ಳುವಾತ. ಬೆಳಗುವುದನ್ನು ಮರೆತರೆ ದರ್ಪಣವಾಗಬಲ್ಲ ಕಂಚು ಬಟ್ಟಲಷ್ಟೇ ಆದೀತು. ಮರೆಯದೆ ಇರಬೇಕಾದರೆ ಕೂಡಲ ಸಂಗಮನನ್ನು ಪೂಜಿಸು.

ಶರಣ ಎಂಬ ಮಾತನ್ನು ವಿವರಿಸಿಕೊಳ್ಳುವುದು ಹೇಗೆ? ಬಹುಶಃ ಶರಣ ಎಂಬ ಮಾತು ವಿನಯವನ್ನು

ಸೂಚಿಸುತ್ತದೆ. ವಿನಯ ಎಂಬ ಮಾತೂ ವಿಚಿತ್ರವೇ..! ಆದರಲ್ಲಿ ನಯ ಅಥವಾ ನಿಯಮ ಕೂಡ ಇದೆ. ವಿನಯ ತನ್ನೊಳಗಿನ ಅರಿವಿನಿಂದಲೇ ಮೂಡುವ ನಿಯಮ, ಶಿಸ್ತು. ಇಂಥ ವಿನಯ ಮೂಡುವುದಕ್ಕೆ ನಾನತ್ವ, ನಾನು ಎಂಬ ವ್ಯಕ್ತಿತ್ವವನ್ನು ನೀಗಿಕೊಳ್ಳುವುದು ಮುಖ್ಯವಾಗುತ್ತದೆಂದು ತೋರುತ್ತದೆ. ಎಲ್ಲ ಧರ್ಮಗಳೂ ಅನುಭವದ ನೆಲೆಯಲ್ಲಿ ಇಂಥ ವಿನಯವನ್ನೇ ನಾವೆಲ್ಲರೂ ಸಾಧಿಸಬೇಕಾದ ಆದರ್ಶ ಎಂದು ಹೇಳುತ್ತವೆ. ಆದರೆ ಧರ್ಮವನ್ನು ಆಚರಣೆಯ ಮಟ್ಟಕ್ಕೆ ಕಟ್ಟಿ ಹಾಕಿಕೊಂಡಾಗ, ರಾಜಕೀಯದ ರಾಷ್ಟ್ರೀಯತೆಯ ಚಹರೆಯ ಮುಖ್ಯ ಲಕ್ಷಣವೆಂದು ವ್ಯಾಖ್ಯಾನಿಸಿಕೊಂಡಾಗ ವಿನಯ ಮರೆಯಾಗಿ ಉದ್ರೇಕ, ಭಾವಾವೇಶ ಮೆರೆಯತೊಡಗುತ್ತವೆ. ಹಾಗಾದಾಗ ಧರ್ಮ ಹಿಂಸೆಯ ಆಕರವಾಗಿ, ಅವಮಾನುಷವಾಗುತ್ತದೆ. ಅಂಥ ಧರ್ಮದ ಅನುಯಾಯಿಗಳೆಲ್ಲ ದ್ವೇಷ, ಹಿಂಸೆಗಳನ್ನು ತುಂಬಿಕೊಳ್ಳುವ ಪಾತ್ರೆಗಳಷ್ಟೇ ಆಗುತ್ತಾರೆ.





ಈ ವಚನವನ್ನು ಕವಿ/ಕಲಾವಿದ ವ್ಯಕ್ತಿತ್ವ ನಿರೂಪಣೆ ಎಂದೂ ಓದಿಕೊಳ್ಳಬಹುದು. ಕವಿ/ಕಲಾವಿದ ನಾನು ಎಂಬುದಿಲ್ಲದ ಕನ್ನಡಿ. ಇರುವ ಭಾವ ವ್ಯಕ್ತಪಡಿಸಬೇಕಾದರೆ ಅದು ಇರುವಂತೆಯೇ ಅರಿಯಬೇಕಾದರೆ ತನ್ನದೆಂಬ ಭಾವ ಇರಲೇಬಾರದು. ತನ್ನನ್ನೇ ತಿಕ್ಕಿ ತಿಕ್ಕಿ ಇಲ್ಲವಾಗಿಸಿಕೊಂಡು ವಾಸ್ತವವನ್ನು ಪ್ರತಿಫಲಿಸುವ ಕನ್ನಡಿ ಆಗಬೇಕು ಕವಿ/ಕಲಾವಿದ. ಕವಿ/ಕಲಾವಿದ ಸ್ವಧರ್ಮ ನಿರತನೇ ಹೊರತು ನಿಜವಾಗಿ ಯಾವ ಧರ್ಮಕ್ಕೂ ಬದ್ಧನಲ್ಲ.

**ಮರೆವು**

*ಮರೆಯಲಾಗದು ಹರಿಯ, ಮರೆಯಲಾಗದು ಬ್ರಹ್ಮನ,*
*ಮರೆಯಲಾಗದು ತೆತ್ತೀಸ ಕೋಟಿ ದೇವರ್ಕಳ*
*ನಮ್ಮ ಕೂಡಲ ಸಂಗಮದೇವರ ಮರೆಯಲಹುದು.*
[(ತಾ) *ಕೂಡಲ ಸಂಗಮದೇವರ ಮರೆಯಲಹುದು.*]

**ಕಾಣುವ ಅರ್ಥ :** ಹರಿಯನ್ನು ಮರೆಯಲಾಗದು. ಬ್ರಹ್ಮನನ್ನು ಮರೆಯಲಾಗದು. ಮೂವತ್ತುಮೂರು ಕೋಟಿ ದೇವತೆಗಳನ್ನು ಮರೆಯಲಾಗದು. ನಮ್ಮ ಕೂಡಲ ಸಂಗಮ ದೇವರನ್ನು ಮರೆಯಲಾಗುತ್ತದೆ.

ಪ್ರಶ್ನೆ: ಈ ಮಾತುಗಳನ್ನು ಅರ್ಥ ಮಾಡಿಕೊಳ್ಳುವುದು ಹೇಗೆ?

ಹರಿ, ಬ್ರಹ್ಮ, ಮೂವತ್ತುಮೂರು ಕೋಟಿ ದೇವತೆಗಳನ್ನು ಮರೆಯಲು ಸಾಧ್ಯವಿಲ್ಲ. ಏಕೆಂದರೆ ಅವರೆಲ್ಲರೂ ಕಥೆಗಳಾಗಿ, ಪುರಾಣಗಳಾಗಿ ನಮ್ಮ ಮನಸ್ಸಿನಲ್ಲಿ ಉಳಿದುಬಿಟ್ಟಿದ್ದಾರೆ. ಕೂಡಲ ಸಂಗಮ ಹಾಗೆ ಕಥೆಯಲ್ಲ. ನಿರೂಪಿಸಿ, ನೆನಪಿಟ್ಟುಕೊಳ್ಳಬಹುದಾದ ಸಂಗತಿಯೋ, ವ್ಯಕ್ತಿಯೋ, ಘಟನೆಯೋ ಅಲ್ಲ. ಕೂಡಲ ಸಂಗಮ ಕ್ಷಣಕ್ಷಣವೂ ಆಗಬೇಕಾದ ಅನುಭವದ ಹೆಸರು. ಕೂಡಲ ಸಂಗಮನನ್ನು ಹರಿ, ಬ್ರಹ್ಮ, ಮೂವತ್ತುಮೂರು ಕೋಟಿ ದೇವತೆಗಳಲ್ಲಿ ಒಬ್ಬನೆಂದುಕೊಂಡರೆ ನಿಜವಾಗಿ ಅವನು

ಮರೆತೇ ಹೋಗುತ್ತಾನೆ. ಇಷ್ಟದೈವದ ಕಲ್ಪನೆಯ ಮುಖ್ಯಾಂಶವೇ ಇದು. ದೈವ ನೆನಪಿನ ವಸ್ತುವಲ್ಲ. ಅನುಭವದ ಎಚ್ಚರ. ಎಚ್ಚರ ಇಲ್ಲವಾದ ಕ್ಷಣವೇ ಆ ಇಷ್ಟ ದೈವವೂ ಇಲ್ಲವಾಗುತ್ತದೆ.

ವಚನಗಳು ಕಥನದ ಹಂಗು ತೊರೆದ ರಚನೆಗಳು ಎಂಬ ಮಾತಿದೆಯಲ್ಲವೇ? ಹಾಗೆ ಕಥನವನ್ನು ತೊರೆದದ್ದರಿಂದಲೇ ಇಂಥ ಮಾತು ಹೇಳಲು ಸಾಧ್ಯವಾಗಿದೆ. ಕಥನಗಳೆಲ್ಲ ನಿರ್ದಿಷ್ಟ ರೂಪಗಳನ್ನೂ ಕ್ರಿಯೆಗಳನ್ನೂ ಆಧರಿಸಿಯೇ ಹುಟ್ಟಿಕೊಳ್ಳುತ್ತವೆ. ಆದರೆ ಕೂಡಲಸಂಗಮನೆಂಬ ಇಷ್ಟ ದೈವ ರೂಪವಲ್ಲ; ಕೇವಲ ನಿ-ರೂಪ. ಅವನು ಜಗದಗಲ, ಮುಗಿಲಗಲ ಇತ್ಯಾದಿ. ಮನದ ಕೊನೆಯ ಮೊನೆಯ ಮೇಲೆ ಇರುವವನು. ಅಂಥವನನ್ನು ಕಥಿಸುವುದಾದರೂ ಹೇಗೆ? ನೆನಪಿಟ್ಟುಕೊಳ್ಳುವುದಾದರೂ ಹೇಗೆ? ಬಹುಶಃ ಅದಕ್ಕೆಂದೇ ಕನ್ನಡ ಸಂಸ್ಕೃತಿಯು ತನ್ನ ಸ್ಮರಣೆಗಾಗಿ ಇಷ್ಟ ದೈವವನ್ನು ಮಾತ್ರ ಒಪ್ಪಿದ ಬಸವನನ್ನೇ ಕಥನ ಮಾಡಿಕೊಂಡು ಬಿಟ್ಟಿತು. ಕೇವಲ ನೆನಪಿನ ಸಂಗತಿಯನ್ನಾಗಿ ಮಾಡಿಕೊಂಡುಬಿಟ್ಟಿತು.

ಪಾಠಾಂತರದಲ್ಲಿ ಬರುವ 'ತಾ ಕೂಡಲ ಸಂಗಮದೇವರ ಮರೆಯಲಹುದು' ಎಂಬ ಮಾತು ಪ್ರತಿಯೊಬ್ಬರೂ ತಮ್ಮ ತಮ್ಮ ಇಷ್ಟ ದೈವದ ಬಗ್ಗೆ ಎಚ್ಚರವನ್ನು ಕಳೆದುಕೊಂಡು ಆ ದೈವವನ್ನು ಮರೆತುಬಿಡಬಹುದು ಎಂಬುದನ್ನು ಸೂಚಿಸುವಂತಿದೆ.

'ಮರೆಯಲಹುದು' ಎಂಬ ಮಾತನ್ನು ಉಳಿದ ದೈವಗಳೆಲ್ಲ ನನ್ನ ಇಷ್ಟದೈವದ 'ಮರೆಯಲ್ಲಿ ಅಹುದು' 'ಮರೆಯಲ್ಲಿ ಸಂಭವಿಸುತ್ತವೆ, ಆಗುತ್ತವೆ' ಎಂದು ಓದಿಕೊಳ್ಳಬಹುದೆ? ಆಗ ರೂಪರಹಿತ ಇಷ್ಟ ದೈವ ಉಳಿದೆಲ್ಲ ದೇವರುಗಳ ಸ್ಮರಣೆಯನ್ನೂ ಮರೆಮಾಡುವ, ಆವರಿಸಿಕೊಳ್ಳುವ ಕಲ್ಪನೆಯಾದೀತಲ್ಲವೇ?

ದೇವರು ಧರ್ಮ ಇವು ಕೇವಲ ನೆನಪಿಗೆ ಸಂಬಂಧಪಟ್ಟ ಸಂಗತಿ. ಎಂದೋ ಆಗಿಹೋದದ್ದನ್ನು, ಯಾವುದೋ ಕಾಲದ ಆಚರಣೆಯನ್ನು ಇಂದು ಚಾಚೂ ತಪ್ಪದೆ ಅನುಸರಿಸಬೇಕೆಂಬುದು ಧರ್ಮವಲ್ಲ. ದೈವ ಕೂಡ ಮನುಷ್ಯ ಮನಸ್ಸು ಕೊಟ್ಟುಕೊಂಡ ಆಕಾರ ಮಾತ್ರವಲ್ಲವೇ? ಇಷ್ಟ ದೈವದ ಕಲ್ಪನೆ ಹುಟ್ಟಿದ್ದು ದೈವವನ್ನು ರೂಪವಿರುವ ವಸ್ತುವೆಂದಲ್ಲ, ಸ್ವಂತ ಅನುಭವದ ಮೂಲಕ ಪಡೆಯಬಹುದಾದ, ಸ್ವ ಅನುಭವವೆಂಬ ನೆಲೆಯಲ್ಲಿ. ಇಷ್ಟ ದೈವ ನೆನಪುಗಳನ್ನು ಆಧರಿಸಿದ್ದಲ್ಲ. ಕ್ಷಣ ಕ್ಷಣದ ಸಾಕ್ಷಾತ್ಕಾರ, ಉಳಿದ ದೈವವೆಲ್ಲ ಅದರ ಮರೆಯಲ್ಲಿ ಇದ್ದುಕೊಳ್ಳುತ್ತವೆ.



### ತಪ್ಪು

*ಆನು ಮಾಡಿದ ತಪ್ಪನೆಣಿಸಿಹೆನೆಂದಡೆ ಗಣನೆಯಿಲ್ಲ*
*ನಡೆದು ತಪ್ಪುವೆ, ನುಡಿದು ತಪ್ಪುವೆ.*
*ಮಾಡಿ ತಪ್ಪುವೆ, ನೀಡಿ ತಪ್ಪುವೆ.*
*ಅರಿದು ತಪ್ಪುವೆ, ಮರೆದು ತಪ್ಪುವೆ.*
*ಎನ್ನ ತಪ್ಪನೊಪ್ಪವ ಮಾಡಿಕೊಂಬುದಲ್ಲದೆ ಚಿತ್ತಕ್ಕೆ ತರಲಾಗದು.*
*ಕೂಡಲ ಸಂಗಯ್ಯನೆಂಬ ಗಂಡನ*
*ಬೆರಸಬೇಕೆಂದು ಕರೆಯಲಟ್ಟಿದೆನು*
*ಶಿವಶರಣರೆಲ್ಲರಿಗೆ ಶರಣೆಂದು [illegible] ತವಕದಲ್ಲಿದ್ದೆನು*

ಈ ವಚನವು ನಾನು ಎಂಬ ಕಲ್ಪಿತ ಕೇಂದ್ರದಿಂದ ವ್ಯವಹರಿಸುವಾಗ ಆಗುವ ತಪ್ಪುಗಳನ್ನು ಕುರಿತು ಹೇಳುತ್ತದೆ. ನಾನು ಎಂದರೇನು? ಎಂದು ನನ್ನೊಳಗೇ ಕೆಲವು ಕಲ್ಪನೆಗಳನ್ನು ರೂಪಿಸಿ, ಪೋಷಿಸಿಕೊಂಡಿರುತ್ತೇನೆ. ಈ ಕಲ್ಪನೆಗಳು ರೂಪುಗೊಳ್ಳಲು ಸುತ್ತಲಿನ ಜನ ಸಮುದಾಯವೂ ಅಥವಾ ಜನ ಸಮುದಾಯವೇ ಕಾರಣವಾಗಿರುತ್ತದೆ. ಹಾಗೆ ನೋಡಿದರೆ ವ್ಯಕ್ತಿತ್ವವೆಂಬುದೇ ಕಲ್ಪನೆ. ಅದನ್ನೇ ಆಧಾರವಾಗಿಟ್ಟುಕೊಂಡು ಮಾಡುವ ಕೆಲಸ, ಆಡುವ ನುಡಿ, ವರ್ತನೆ, ಅರಿವು, ಮರೆವು ಎಲ್ಲವೂ ತಪ್ಪುಗಳೇ ಆಗುತ್ತವೆ. ವಾಸ್ತವಕ್ಕೂ ನನ್ನ ಕಲ್ಪಿತ ವ್ಯಕ್ತಿತ್ವಕ್ಕೂ ಇರುವ ಅಂತರ, ವೈರುಧ್ಯಗಳು ತಪ್ಪಿನ ಭಾವವನ್ನು ಮೂಡಿಸುತ್ತವೆ. ಇದನ್ನು ಒಪ್ಪಮಾಡಿಕೊಳ್ಳುವುದೆಂದರೆ ಕಲ್ಪಿತ ವ್ಯಕ್ತಿತ್ವವೂ ಇರದ ಶುದ್ಧ ಏಕಾಂತ ಸ್ಥಿತಿಯ ಕ್ರಿಯೆ. ಅದಕ್ಕೆ ನನ್ನ ಸುತ್ತಲ ಸಮುದಾಯ, ಅದು ಶಿವಶರಣರ ಸಮುದಾಯವೇ ಆಗಿದ್ದರೂ ಆತಂಕವನ್ನೇ ತರುತ್ತದೆ. ಅವರಿಗೂ ಶರಣು ಹೇಳಿ, ಗುಡ್‌ಬೈ ಹೇಳಿ, ನಾನು ಮತ್ತು ಕೂಡಲ ಸಂಗಯ್ಯ ಮಾತ್ರ ಇರುವ ಸ್ಥಿತಿಗೆ ಬೀಳ್ಕೊಂಡು ಹೊರಡುವುದು ಒಂದೇ ಗತಿ. ಬಸವಣ್ಣನನ್ನು ಎಷ್ಟೇ ಸಾಮಾಜಿಕನೆಂದರೂ ಅವನು ಬಯಸುವ ಏಕಾಂತ ಈ ವಚನದ ಆಕರ್ಷಣೆಗೆ ಕಾರಣ.

('ಉದಯವಾಣಿ' - ಸಾಪ್ತಾಹಿಕ ಸಂಪದದ ಏಕಾಂತ ಲೋಕಾಂತ ಅಂಕಣದಿಂದ)

---

**ಜಾನಪದ ಹುಡುಕಾಟ...**

## ಕೂಲಿ ಅಳು

**ಹೇಳಿದವರು: ಶ್ರೀಮತಿ ನರಸಮ್ಮ**

**ಸಂಗ್ರಹ: ಡಿ. ರಾಮಚಂದ್ರಯ್ಯ, ಮಾಗಡಿ.**

ನಿಮ್ಮ ಹಳ್ಳಿಯಂತಾ ಒಂದು ಹಳ್ಳಿ. ಹಳ್ಳೀಲಿ ಎಲ್ಲಾ ಸಾಮಾನ್ಯಕ್ಕೆ ಅವರವರ ಕೈಗೆ ಬಾಯಿಗೆ ತಕ್ಕಂಗಿದ್ದರು. ಇಂಥಾ ಊರಲ್ಲಿ ಒಂದು ತಬ್ಬಲಿ ಇತ್ತು. ತಬ್ಬಲಿ ಅಂದರೆ ಅದೇನು ಮಗುವಲ್ಲ ಒಂದು ಮದುವೇಂತ ಆಗಿ ಯಂಡ್ರು ಸುಖಾ ಕಾಣದೆ ಅಪ್ಪ ಅಮ್ಮ ಯಾರೂ ಇಲ್ಲದೆ ಇತ್ತು. ಬೆಪ್ಪನಂಗೆ ಕೂತಿರದು. ಯಾರಾದರೂ ಕೊಟ್ರೆ ಉಣ್ಣದು ಇಲ್ಲಾ ತಿನ್ನೋರ ಕಂಡ್ರೆ ನಂಗೆ ನಂಗೆ ಅಂತ ಕೈ ಒಡ್ಡದು.

ಒಂದು ದಿನ ಇವ್ನಿಗೆ ಒಂದು ಸಾವು ಬರೋದೆ ಬಂತು ಸತ್ತ. ಜನ ಇವ್ನು ಇದ್ದಾಗ ಹೆಂಗಿದ್ದರೋ ಸತ್ತಾಗಲೂ ಅಂಗೆಯ. ಹೆಣಕ್ಕೆ ನೊಣ ಮುಸುರ ಹತ್ತಿತು. ಇರುವೆ ಹಿಂದೆ ಹೋಗಿ ಮುಂದೆ ಬರಾಕೆ ಹತ್ತಿದವು.

ಎಷ್ಟೊತ್ತೂಂತ ನಾತ ಕುಡಿಯಾಕಾದಾತು. ಕಡೀಕೆ ಊರಗೌಡ, ಯಜಮಾನ, ಆಣಾಕಾರ ಅನ್ನೋರು ನಾಕು ಮಂದಿ ಸೇರಿಕೊಂಡರು. ತಬ್ಬಲಿಗೊಂದು ಗತಿ ಕಾಣಿಸಾನಾಂತ ಸೊಂಟಕ್ಕೆ ಬಟ್ಟೆ ಕಟ್ಕಂಡು ನಿಂತರು. ಅವ್ರಿಂದೆ ಒಬ್ಬೊಬ್ರೇ ಬಂದರು. ನೊಣ ಗಾಬ್ರಿಯಿಂದ ಚದ್ರಿದವು.

ಹೆಣಕ್ಕೆ ಹೊಸಾಬಟ್ಟೆ, ಕೂಳು ಬೆಯ್ಸೋಕೆ ಮಡಕೆ, ಗಡಿಗೆ, ಗಂಧದ ಕಡ್ಡಿ, ಹೂವ, ಧೂಪ, ದೀಪ, ಅಡಿಕೆ, ವೀಳ್ಯೇದೆಲೆ, ನವಧಾನ್ಯ ಎಲ್ಲಾ ಹೊಂಚಿಕೊಂಡು ಮನೆ ಮಾಡಕೇಂತ ನಾಲ್ಕು ಜನಾನು ಕಳಿಸಿದ್ರು. ಮನೆಯೂ ಆಯ್ತು. ತಾಟಾಪ್ರೋಟೆ ಪಾಲಿಗದೋನೊಬ್ಬ ಬಿಟ್ಟಿಯಾಗೇ ಪಾದ್ರಕ್ಕೇಂತ ಒಪ್ಪಿಕೊಂಡು ಬಂದ.

ಈಗ ಮುಖ್ಯವಾಗಿ ಬೇಕಾದ್ದು ಹೆಣದ ಹಿಂದೆ ಸೋಕಾಂತ ಮಾಡಕೆ ಜನ. ಆಣಕಾರ ತೋಟಿನ ಕರ್ರು ನೋಡೋ ಇದ್ದಿದ್ರಲ್ಲಿ ಕಡಿಮೆ ಕಾಸಿಗೆ ಚನ್ನಾಗಿ ಅಳೋರ್ನ ಕರಕಂಡು ಬಾ ಅಂದ. ಆಯ್ತೂಂತ ಹೋದವನೇ ಇಬ್ಬರು ಅಕ್ಕ ತಂಗೇರ್ನ ಕರ್ಕಂಡು ಬಂದ. ಅವರು ಬತ್‌ಬರ್ತಾ ಇದ್ದೋರೇ ಯಣ್ಣಾ ನೆನ್ನೆ ಗುಂಡ್ಕಲ್ಲಂಗಿದ್ದೋನು ಈವತ್ತು ಸತ್ತ ನಾಯ್ನಂಗೆ ಬಿದ್ಕಂಡಿದ್ದೀಯಲ್ಲೋ.... ಅಂತ ಹೆಣದ ಆಕಡೆ ಒಬ್ಬಳು, ಈಕಡೆ ಒಬ್ಬಳು ಕೂತಕೊಂಡು ರಾಗವಾಗಿ ಅಳಕ್ಕೆ ಸುರುಮಾಡಿದರು. ಈವತ್ತಿಸಲಾಗಾಯ್ತು ನಮ್ಮನ್ನ ಒಡವುಟ್ಟಿದ ಅಕ್ಕ ತಂಗೇರಂಗೆ ಕಂಡ್ಕಂಡಿದ್ದೆಲ್ಲೋ, ನಿನ್ ಕಾಲು ಕೈ ಕಂಭದಂಗಿದ್ದೋವು ಒಳಕಲು ಸೀಗೆಕಾಯಾಗವಲ್ಲೋ ಯಣ್ಣಾ, ಈಀ ಊರಿಗೇ ತಂದೆ ಇದ್ದಂಗಿದ್ದೆಲ್ಲೋ, ಜೀವುಮಾನವೆಲ್ಲಾ ಕಡುಕಷ್ಟದಾಗೇ ತಳ್‌ದೆಲ್ಲೋಽ... ಅಂತ ಗೋಳಾಟ ನಡೆಸುತ್ತಲೇ ಇದ್ದರು.

ಯಜಮಾನ ಹೆಣಕ್ಕೆ ಸಾನಾಂತ ಮಾಡಿಸಿದ್ರು ಅದರಿಂದ್ಲೇ ಅಲ್ಲಿರೋರೆಲ್ಲಾ ತಲಾಗೆ ಒಂದೊಂದು ಚಂಬು ನೀರಾಕಿದರು. ಪೂಜೆ ಮಾಡಿ ಹೆಣ ಎತ್ತಲು ಹೇಳಿದರು. ಈಗ ಈ ಅಕ್ಕ ತಂಗೇರ ಶಿವಗೋಳು, ಯಮಗೋಳು ಜಾಸ್ತಿಯಾಯಿತು. ನಿನ್‌ಗೆ ಯಾರಿಂದ್ಲೂ ಸುಖಾನ್ನದು ಚೂರಾದ್ರೂ ಬ್ಯಾಡವೇನೋ ಯಣ್ಣಾ..., ಯಾವು ಜಲ್ಮದಾಗೆ ಏನು ಕರ್ಮ ಮಾಡಿ ಹುಟ್ಟಿದ್ದೋ ಯಣ್ಣಾ... ಯಾವ್ ಮಾಯದ ಪಕ್ಸಿ ಬಂದು ಹೊತ್ಗಂಡೋಯ್ತೋಽ ನಿನ್ನ... ಅಂತ ನೆಲ ಪರಚ ಹತ್ತಿದರು. ಇವುರ ಗೋಳಾಟ ನೋಡಿ ಗೊತ್ತಿಲ್ಲದೋರು ಗ್ಯಾರಂಟಿ ಇವುರು ನಿಜವಾದ ಅಣ್ಣ ತಂಗೇರು ಅನಕಂಡಿದ್ರೆ ಅಚ್ಚರಿ ಇಲ್ಲ.

ಅಳು ಕೇಳುತ್ತಾ ಹೋದ ಗೌಡ, ಯಜಮಾನ, ಆಣಕಾರ ಎಲ್ಲಾರು ಅಕ್ಕ ತಂಗೇರಿಗೆ ಶಭಾಷ್‌ಗಿರಿ ಹಾಕಿದರು.

ಹೆಣ ಎತ್ತಿದ ಮೇಲೆ ಮನೆಗೊಂದೊಂದು ಆಳು ಜಗಾನು ಜಾತ್ರೆಯಾಗಿ ಹೊರಟಿತು. ಈ ಅಕ್ಕತಂಗೇರು ಅಳು ಈಗ ಕೊಕಲಿಗೆ ಬೀಳುತ್ತಾ ಇದೆ ಅನಿಸಿತು. ಇಬ್ಬರು, ಮೂವರು ಮಾತಾಡಿಕೊಂಡರು. ಏಕೆಂದರೆ, ಅದೇ ಮಾತು, ಅದೇ ರಾಗ, ತಿರುಗಾ ತಿರುಗಾ ಕೇಳುತಿತ್ತು. ಹೊಸಾ ರಾಗಕ್ಕಾಗಿ ಹೊಸಾ ಮಾತುಗಳಿಗಾಗಿ ತಂಗಿ ಅಕ್ಕನ್ನ ಅಕ್ಕ ತಂಗಿನ್ನ ಮುಖ ಮುಖ ನೋಡಿಕೊಂಡರು. ಆಗಲೇ ಇವರ ಗೋಳು ಮಾಮೂಲಿಗೆ ತಲುಪಿ ಜನ ಆಕಡೆ ಕಿವಿ ಕೊಡೋದನ್ನ ನಿಲ್ಲಿಸಿದ್ದರು. ವಾಲಗದೋನು ಬೇರೆ ಮೊದಲೇ ತಾಟಾಪೋಟಿ, ತಮಟೆ ಎಲ್ಲಾ ಸೇರಿ ಬರೀ ಗಲಬೆಯಾಗಿತ್ತು.

ಮಣ್ಣು ಮಡಕೆ ತ್ವಾಟದ ಸಾಲಿನ ಒಳಗೆ ಹೋಗಬೇಕಾಗಿತ್ತು. ತೋಟಗಳಲ್ಲಿ ಅದ್ನುಕಾಯಿ, ಆಗಲ, ಬೆಂಡೆ, ಬದನೆ, ಈರೆ, ಸೋರೆಕಾಯಿ ಹಿಂಗೆ ತರಾವರಿ ತರಕಾರಿ ಬೆಳೆದಿದ್ದರು. ಇವುನ್ನ ಕಂಡ ಅಕ್ಕಂಗೆ ಹೊಸಾ ಭಂಡಾರ ಸಿಕ್ಕಂಗೆ ಸೊಲ್ಲೆತ್ತಿ

'ಯವ್ವಾನಾ ಈಽಽಽ ಆಗುಲಕಾಯಿ ನೋಽಽಽಡೇಽಽ'

'ಯಕ್ಕಾನಾ ಬರುವಾಗ ಬರಾನಾನ ಬಾರೇಽಽ'

'ಯವ್ವಾನಾ ಈಽಽಽ ಅದ್ನುಕಾಯಿ ನೋಽಽಽಡೇಽಽ'

'ಯಕ್ಕಾನಾ ಬರುವಾಗ ಬರಾನಾನ ಬಾರೇಽಽ'

'ಯವ್ವಾನಾ ಈಽಽಽ ಬದುನೆಕಾಯಿ ನೋಽಽಽಡೇಽಽ'

'ಯಕ್ಕಾನಾ ಬರುವಾಗ ಬರಾನಾನ ಬಾರೇಽಽ'

ಅಂತ ಇರೋ ಪರೋ ತರಕಾರಿ ಮೇಲೆಲ್ಲಾ ಕಣ್ಣೀರು ಸುರಿಸಿದರು.

ನಿನ್ನಂತೊನೊಬ್ಬ ಇಂತೋಳೊಬ್ಬಳು ಅಂಗೇ ಕೇಳಿಸ್ಕತಿದ್ದೋರು 'ಯಲಾ ಯಲಾ ಐನಾತಿ ಮುಂಡೇರಾ' ಆವಾಗಿಸಿಂದ ಏನೇನಂತಿದ್ದರೋ ಕೇಳಿಸ್ಕ ಬೇಕಾಗಿತ್ತಲ್ಲಾ ಅಂದು ಕೊಂಡರು.

# ಕನ್ನಡ ಮೇಷ್ಟ್ರು ಪರಂಪರೆ ಶ್ರೀಮಂತಗೊಳಿಸಿದ ರಾಜುಮೇಷ್ಟ್ರು

-ರಘುನಾಥ ಚ.ಹ.



ಚಿತ್ರ: ಎನ್. ವೀರಮೂರ್ತಿ, ಮಂಡ್ಯ

ಪಾವಲಿ ಎಂಟಾಣೆ ಬಿಲ್ಲೆಗಳೊಂದಿಗೆ ಕಲ್ಲುಸಕ್ಕರೆ, ಪೆಪ್ಪರುಮಿಂಟುಗಳನ್ನು ಜೇಬಿನಲ್ಲಿಯೊ ಅಥವಾ ಅಡಿಕೆಲೆ ಚೀಲದಲ್ಲಿಯೊ ಇಟ್ಟುಕೊಳ್ಳುವ ಅಜ್ಜ/ಅಜ್ಜಿಯರು ಗ್ರಾಮೀಣ ಪ್ರದೇಶಗಳಲ್ಲಿ ಇನ್ನೂ ಇದ್ದಾರೆ. ಮೊಮ್ಮಕ್ಕಳೇ ಆಗಬೇಕೆಂದಿಲ್ಲ ಯಾರ ಮಕ್ಕಳಾದರೂ ಸರಿ, ಅಜ್ಜ/ಅಜ್ಜಿಯ ಖಜಾನೆಯಿಂದ ಪೆಪ್ಪರಮಿಂಟೊ ನಾಕಾಣೆಯೊ ಪಾವತಿಯಾಗುತ್ತದೆ. ಅಂಥ ಸಂದರ್ಭಗಳಲ್ಲಿ ಮಕ್ಕಳ ಮೊಗದಲ್ಲಿ ಮಿನುಗುವ ಖುಷಿಯನ್ನು ಹಾಗೂ ಆ ಖುಷಿ ಪ್ರತಿಫಲಿಸುವ ಅಜ್ಜ/ಅಜ್ಜಿಯ ಕಣ್ಣಲ್ಲಿನ ಮಿಂಚನ್ನು ನೋಡಬೇಕು. ರಾಜು ಮೇಷ್ಟ್ರನ್ನ ನೋಡಿದಾಗಲೆಲ್ಲ ನನಗೆ ಅಂಥ ಅಜ್ಜನ ನೆನಪಾಗುತ್ತದೆ.

ಕಿರಿಯರ ಬಗ್ಗೆ ಅಪಾರ ಅಂತಃಕರಣವನ್ನು ತುಂಬಿಕೊಂಡವರು ಚಿ. ಶ್ರೀನಿವಾಸರಾಜು. ಅವರು ನನಗೆ ಯಾವತ್ತೂ ಪೆಪ್ಪರಮಿಂಟು ಕೊಟ್ಟವರಲ್ಲ. ಆದರೆ ಅವರೊಂದಿಗಿನ ಬಹುತೇಕ ಭೇಟಿಗಳಲ್ಲಿ ಹೊಸ ಪುಸ್ತಕವಿಲ್ಲದೆ ನಾನು ವಾಪಸ್ಸಾದದ್ದಿಲ್ಲ. ಮೇಷ್ಟ್ರು ಈ ಬಾರಿ ಯಾವ ಪುಸ್ತಕ ಕೊಡುತ್ತಾರೆ ಎಂದು ಅವರನ್ನು ಭೇಟಿಯಾದ ಪ್ರತಿ ಸಂದರ್ಭದಲ್ಲಿಯೂ ಅಜ್ಜ ಕೊಡುವ ಪೆಪ್ಪರಮೆಂಟಿಗೆ ಕಾತರಿಸುವ ಮಕ್ಕಳಂತೆ ನಾನು ಕಾತರಿಸಿದ್ದೇನೆ. ಅವರು ನಿರಾಸೆ ಮಾಡಿದ್ದು ಕಡಿಮೆ. ಮನೆಗೆ ಹೋದರಂತೂ ಮೇಷ್ಟ್ರ ಕಡೆಯಿಂದ ಪುಸ್ತಕ ಹಾಗೂ ಮೇಷ್ಟ್ರ ಶ್ರೀಮತಿ ಸರಸ್ವತಿ ಮೇಡಂ ಅವರಿಂದ ತಿಂಡಿಗೆ ಮೋಸವಿಲ್ಲ! ಶ್ರೀನಿವಾಸರಾಜು ಅಂದಕೂಡಲೇ ನನ್ನ ಕಣ್ಣೆದುರು ಬರುವುದು - ಕೈಯಲ್ಲಿ ಪುಸ್ತಕ ಹಿಡಿದ ಕಿಂದರಜೋಗಿಯಂಥ ಮನುಷ್ಯ ಹಾಗೂ ಸದಾ ಪ್ರೀತಿಯನ್ನೇ ಸ್ಫುರಿಸುವ ಜೋಡಿ ಕಣ್ಣುಗಳು.

ರಾಜು ಮೇಷ್ಟ್ರು ಹಾಗೂ ನನ್ನ ಪರಿಚಯ ಪ್ರಾರಂಭವಾದದ್ದು ಪುಸ್ತಕಗಳ ಮೂಲಕವೇ. ನಾನಾಗ ಪಾಲಿಟೆಕ್ನಿಕ್ ವಿದ್ಯಾರ್ಥಿ. ಕ್ರೈಸ್ಟ್ ಕಾಲೇಜಿನ ಕನ್ನಡ ಸಂಘ ನಡೆಸುವ ಬೇಂದ್ರೆ ಸ್ಮೃತಿ ಕವನ ಸ್ಪರ್ಧೆ ಹಾಗೂ ಪುಸ್ತಕ ಪ್ರಕಟಣೆಯ ಬಗ್ಗೆ ಎಲ್ಲೋ ಓದಿದ್ದೆ. ಬಹುಮಾನಿತ ಕವಿತೆಗಳ ಪುಸ್ತಕ ಓದುವ ಕುತೂಹಲ. ಶ್ರೀನಿವಾಸರಾಜು ಮಾತ್ರವಲ್ಲ, ಕ್ರೈಸ್ಟ್ ಕಾಲೇಜ್ ಯಾವ ದಿಕ್ಕಿಗಿದೆ ಎನ್ನುವುದೂ ಗೊತ್ತಿಲ್ಲದ ಸಂದರ್ಭ. ಪತ್ರಿಕೆಯಲ್ಲಿ ಕನ್ನಡ ಸಂಘದ ವಿಳಾಸ ಸಿಕ್ಕಿತು. ಆ ವಿಳಾಸಕ್ಕೆ ೧೦ ರುಪಾಯಿ ಮನಿಯಾರ್ಡರ್ ಮಾಡಿ ಪುಸ್ತಕ ಕಳಿಸುವಂತೆ ಪತ್ರ ಬರೆದೆ. ಮರೆತೆ, ಒಂದು ದಿನ ಇದ್ದಕ್ಕಿದ್ದಂತೆಯೇ ಬರಬೇಕೆ ಪುಸ್ತಕಗಳು. ನಾನು ಕೇಳಿದ್ದು ಒಂದು ಪುಸ್ತಕ. ಬಂದದ್ದು ನಾಲ್ಕು. ನೀವು ಓದಿ, ಗೆಳೆಯರಿಗೂ ಓದಲು ಕೊಡಿ ಎಂದು ಚಿಕ್ಕದೊಂದು

ಒಕ್ಕಣೆ. ಕೆಳಗೆ ಸಹಿ. ಅದು ಶ್ರೀನಿವಾಸರಾಜು ಅವರ ಸಹಿ ಅನ್ನುವುದು ಗೊತ್ತಾದದ್ದು ಅವರ ಪರಿಚಯವಾದ ನಂತರವೇ. ಹೀಗೆ ಪ್ರಾರಂಭವಾದ ಪುಸ್ತಕ ನಂಟು ನಂತರದ ವರ್ಷಗಳಲ್ಲಿ ಕನ್ನಡ ಸಂಘದ ಕವನ ಸ್ಪರ್ಧೆಯಲ್ಲಿ ಬಹುಮಾನ ಪಡೆಯುವುದರೊಂದಿಗೆ, ಆಗಾಗ ಸಿಕ್ಕ ಭೇಟಿಯ ಅವಕಾಶಗಳಲ್ಲಿ ಮುಂದುವರಿದಿದೆ. ರಾಜು ಮೇಷ್ಟ್ರಿಂದ ಪುಸ್ತಕ ಪಡೆಯುವುದು ನನ್ನ ಹಕ್ಕು ಎಂದೇ ಭಾವಿಸಿಬಿಟ್ಟಿದ್ದೇನೆ. ಅವರ ಪ್ರೀತಿ, ಕಾಳಜಿ, ಸಹನೆ ಎದುರು ಅನೇಕ ಬಾರಿ ನಾನು ಬೆಚ್ಚಿಬಿದ್ದದ್ದೂ ಇದೆ.

ಶ್ರೀನಿವಾಸರಾಜು ಅವರ ಜೊತೆಗಿನ ನನ್ನ ಈ ಅನುಭವಗಳು ನನ್ನವು ಮಾತ್ರ ಎಂದು ನಾನು ಭಾವಿಸಿಲ್ಲ. ಅವರ ಪರಿಚಯದ ವ್ಯಾಪ್ತಿಗೆ ಬಂದ ಎಲ್ಲರೂ ಇಂಥ ಅನುಭವವನ್ನು ಆಗಾಗ ಬಯಸಿ ಬಯಸಿ ಹೊಂದುತ್ತಲೇ ಇರುತ್ತಾರೆ. ನನ್ನ ಜಮಾನದ ಅನೇಕರಿಗೆ ಪಾಠ ಹೇಳದಿದ್ದರೂ ಶ್ರೀನಿವಾಸರಾಜು 'ಮೇಷ್ಟ್ರು'. ನಾಡಿನುದ್ದಕ್ಕೂ ಅವರ ವಿದ್ಯಾರ್ಥಿಗಳು ಇದ್ದಾರೆ.

'ಶ್ರೀನಿವಾಸರಾಜು ಒಂದು ವಿಶ್ವವಿದ್ಯಾಲಯ' ಎಂದು ಅವರ ಬಗ್ಗೆ ಮಾತನಾಡುವವರೆಲ್ಲ ಹೇಳುವುದು ಸಂಪ್ರದಾಯವೇ ಆಗಿ ಹೋಗಿದೆ. ಒಂದು ವಿಶ್ವವಿದ್ಯಾಲಯ ಮಾಡಬಹುದಾದ ಸಾಹಿತ್ಯ ಪ್ರಕಟಣೆಯ ಕೆಲಸವನ್ನು ಕ್ರೈಸ್ಟ್ ಕಾಲೇಜು ಕನ್ನಡ ಸಂಘದ ಮೂಲಕ ಮೇಷ್ಟ್ರು ಮಾಡಿದ್ದರಲ್ಲಿ ಎರಡು ಮಾತಿಲ್ಲ. ಆದರೆ ನಮ್ಮ ನಡುವಿನ ಯಾವುದೇ ವಿಶ್ವವಿದ್ಯಾಲಯ ಮುಟ್ಟಲು ಸಾಧ್ಯವಾಗದ ಮೈಲುಗಲ್ಲನ್ನು ಅವರು ಮುಟ್ಟಿದ್ದಾರೆ. ಅದೆಂದರೆ, ಪುಸ್ತಕ ಪ್ರಕಟಣೆಯ ಜೊತೆಜೊತೆಗೇ ಓದುಗ/ಲೇಖಕರ ಬಳಗವನ್ನು ಸೃಷ್ಟಿಸಲು ಪ್ರಯತ್ನಿಸಿದ್ದು.

ಕ್ರೈಸ್ಟ್ ಕಾಲೇಜು ಕನ್ನಡ ಸಂಘದ ಮೂಲಕ ಒಂದುನೂರ ಎಪ್ಪತ್ತಕ್ಕೂ ಹೆಚ್ಚು ಪುಸ್ತಕಗಳನ್ನು ಶ್ರೀನಿವಾಸರಾಜು ಪ್ರಕಟಿಸಿದ್ದಾರೆ. ಇದು ಲೆಕ್ಕದ ಮಾತು. ಆದರೆ. ಈ ಪುಸ್ತಕಗಳ ಮೂಲಕ ಅವರು ಬೆಸೆದ ಲೇಖಕರ ಓದುಗರ ಬಳಗ ಲೆಕ್ಕಕ್ಕೆ ಸಿಗದು. ಇವತ್ತಿನ ಕನ್ನಡ ಸಂದರ್ಭದ ಅನೇಕ ಮಹತ್ವದ ಬರಹಗಾರರ ಮೊದಲ ಪುಸ್ತಕಗಳು ಕನ್ನಡ ಸಂಘದ ಮೂಲಕ ಪ್ರಕಟವಾಗಿವೆ. ಬೇಂದ್ರೆ ಸ್ಮೃತಿ ಅಂತರಕಾಲೇಜು ಕವನ ಸ್ಪರ್ಧೆಯ ಮೂಲಕ, ಅನಕೃ ಸ್ಮಾರಕ ಲೇಖನ ಸ್ಪರ್ಧೆಯ ಮೂಲಕ ಅನೇಕ ಯುವ ಬರಹಗಾರರು ಬೆಳಕಿಗೆ ಬಂದಿದ್ದಾರೆ. ಈ ಸ್ಪರ್ಧೆಗಳ ಮೂಲಕವೇ ನಾಡಿನ ವಿವಿಧ ಭಾಗಗಳಲ್ಲಿ ನೆಲೆಸಿರುವ ಯುವ ಬರಹಗಾರರ ನಡುವೆ ಬೆಸುಗೆ ಸಾಧ್ಯವಾಗಿದೆ. ಕೆಲವೊಮ್ಮೆ ಮುಖ ನೋಡದಿದ್ದರೂ ಅಕ್ಷರಮೈತ್ರಿ ಸಾಧ್ಯವಾಗಿದೆ. ಇದು ಕನ್ನಡದ ಮೇಷ್ಟ್ರೊಬ್ಬರು ಮಾಡಬಹುದಾದ ಅತ್ಯಂತ ಶ್ರೇಷ್ಠ ಸಾಧನೆ.

ಬಹುತೇಕ ಸೃಜನಶೀಲ ಸಾಧಕರಂತೆ ಶ್ರೀನಿವಾಸರಾಜು ಅವರ ಬೇರುಗಳಿರುವುದೂ ಗ್ರಾಮೀಣ ಪರಿಸರದಲ್ಲೇ. ಕೋಲಾರ ಜಿಲ್ಲೆಯ ಚಿಕ್ಕಬಳ್ಳಾಪುರ ಶ್ರೀನಿವಾಸರಾಜು ಅವರ ತವರು. ಹುಟ್ಟಿದ್ದು ನವಂಬರ್ ೨೮ ೧೯೪೨ರಲ್ಲಿ. ತಂದೆ ಚಿಕ್ಕರಾಜು, ಸರ್ಕಾರಿ ನೌಕರರು. ತಾಯಿ ಸಾವಿತ್ರಮ್ಮ. ಪ್ರಾಥಮಿಕ ವಿದ್ಯಾಭ್ಯಾಸ ಚಿಕ್ಕಬಳ್ಳಾಪುರದಲ್ಲಿ, ಬೆಳೆದದ್ದು ದೊಡ್ಡಮ್ಮನ ಆಶ್ರಯದಲ್ಲಿ. ಮಗ ಪೊಲೀಸ್ ಇಲಾಖೆಗೆ ಸೇರಬೇಕೆಂದು ಅಪ್ಪ ಬಯಸಿದ್ದರೂ, ನಡೆದದ್ದೇ ಬೇರೆ. ಬೆಂಗಳೂರಿನ ಸೇಂಟ್ ಜೋಸೆಫ್ ಕಾಲೇಜಿನಲ್ಲಿ ರಾಜು ಬಿ.ಎಸ್ಸಿ ಓದಿದರು. ನಂತರ ಬಿ.ಎ., ಎಂ.ಎ., ಇದಿಷ್ಟೂ ವಿದ್ಯಾಭ್ಯಾಸದ ಮಾತು.

ಇಷ್ಟಪಟ್ಟಿದ್ದರೆ ಶ್ರೀನಿವಾಸರಾಜು ಇಂಜಿನಿಯರಿಂಗ್ ಓದಬಹುದಿತ್ತು. ದಾವಣಗೆರೆಯಲ್ಲಿ ಸೀಟೂ ಸಿಕ್ಕಿತ್ತು. ಆದರೆ ಮಗ ಕಣ್ಮುಂದೆಯೇ ಇರಲೆಂಬ ಹೆತ್ತವರ ಆಸೆ ಶ್ರೀನಿವಾಸರಾಜು ಅವರ ದಿಕ್ಕನ್ನು ಬದಲಿಸಿತು. ಆದದ್ದೆಲ್ಲಾ ಒಳ್ಳೆಯದೇ. ಶ್ರೀನಿವಾಸರಾಜು ಇಂಜಿನಿಯರ್ ಆಗಿದ್ದಿದ್ದರೆ ಆರ್ಥಿಕ ದೃಷ್ಟಿಯಿಂದ ಅವರ ಬದುಕು ಇನ್ನಷ್ಟು ಸುಧಾರಿಸುತ್ತಿತ್ತೇನೋ; ಆದರೆ ಅಪರೂಪದ ಸಾಂಸ್ಕೃತಿಕ ಪರಿಚಾರಕನನ್ನು ಕನ್ನಡ ಸಾರಸ್ವತ ಲೋಕ ಕಳೆದುಕೊಳ್ಳುತ್ತಿತ್ತು.

'ಲೋಹ ಅಭಿವೃದ್ಧಿ ಮಂಡಳಿ'ಯಲ್ಲಿ ಸಾರಿಗೆ ಅಧಿಕಾರಿಯಾಗಿ ನೌಕರಿ ಆರಂಭಿಸಿ, ಎರಡು ವರ್ಷ ದುಡಿಯುವಷ್ಟರಲ್ಲಿ ಸಾಂಸ್ಕೃತಿಕ ಲೋಕದ ಸೆಳೆತಕ್ಕೆ ಒಳಗಾದ ಶ್ರೀನಿವಾಸರಾಜು ಅವರಿಗೆ ವೃತ್ತಿ ಬೇಸರ ತಂದಿತು. ಬಿ.ಎ ಕ್ಲಾಸಿಗೆ ಸೇರಿಕೊಳ್ಳುವ ಮೂಲಕ ಓದು ಮುಂದುವರಿಸಿದರು. ನಂತರದಲ್ಲಿ ಎಂ.ಎ. ಈ ದಿನಗಳಲ್ಲಿ ಕೆ.ವಿ. ನಾರಾಯಣ, ಎಚ್.ಎಸ್. ರಾಘವೇಂದ್ರರಾವ್, ಕಿ.ರಂ. ನಾಗರಾಜು ಮುಂತಾದ ಗೆಳೆಯರ ಒಡನಾಟದಿಂದಾಗಿ ಕನ್ನಡದ ಬಗೆಗಿನ ಆಸಕ್ತಿ ಹದಗೊಂಡರೆ, 'ಕನ್ನಡ ಮೇಷ್ಟ್ರು' ಪರಂಪರೆಗೆ ಗೌರವ ತಂದ ಜಿ.ಪಿ. ರಾಜರತ್ನಂ, ಎಂ.ವಿ. ಸೀತಾರಾಮಯ್ಯ, ರಂ.ಶ್ರೀ. ಮುಗಳಿ, ಜಿ.ಎಸ್. ಶಿವರುದ್ರಪ್ಪನವರಿಂದ ಪಾಠ ಕೇಳುವ ಯೋಗ ಕನ್ನಡದ ಬಗೆಗಿನ ಪ್ರೀತಿ ಬೆಳೆಸಿತು.

ಶ್ರೀನಿವಾಸರಾಜು ಅವರು ಕ್ರೈಸ್ಟ್ ಕಾಲೇಜು ಸೇರಿದ್ದು ೧೯೬೯ರಲ್ಲಿ. ಅಪ್ಪಟ ಇಂಗ್ಲಿಷ್ ಸಂಸ್ಕೃತಿಯ ಪರಿಸರದಲ್ಲಿ ಕನ್ನಡದ ಬೀಜ ಊರುವ ಸವಾಲು ಅವರ ಮುಂದಿತ್ತು. ಕಾಲೇಜು ಸೇರಿದ ಮರುವರ್ಷವೇ (೧೯೭೦) ಮದುವೆಯಾದರು. ಸರಸ್ವತಿ ಅವರನ್ನು ಮದುವೆಯಾದ ಎರಡೇ ವರ್ಷಗಳಲ್ಲಿ (೧೯೭೨) ರಾಜು ಅವರಿಗೆ ಇನ್ನೊಂದು ಮದುವೆ; ಕನ್ನತ ಸಂಘದ ರೂಪದಲ್ಲಿ! (ಕುಟುಂಬದ ಬಗ್ಗೆ ಹರಿಸಿದ್ದಕ್ಕಿಂಥ ಹೆಚ್ಚು ಗಮನವನ್ನು ಕನ್ನಡ ಸಂಘದ ಚಟುವಟಿಕೆಗಳಿಗೆ ನೀಡಿದ್ದರಿಂದ, ಕನ್ನಡ ಸಂಘವನ್ನು ರಾಜುಮೇಷ್ಟ್ರ ಎರಡನೇ ಹೆಂಡತಿ ಅಂದರೆ ತಪ್ಪಿಲ್ಲ ತಾನೇ!?)

ಅಧ್ಯಯನದ ದಿನಗಳಲ್ಲಿ ಸೆಂಟ್ರಲ್ ಕಾಲೇಜಿನ ಪರಿಸರ ಶ್ರೀನಿವಾಸರಾಜು ಅವರ ಮೇಲೆ ಎರಡು ರೀತಿಯಲ್ಲಿ ಪ್ರಭಾವ ಬೀರಿತ್ತು. ಮೊದಲನೆಯದಾಗಿ, ರಾಜು ಅವರನ್ನು ಸೆಂಟ್ರಲ್ ಕಾಲೇಜಿನ ಪರಿಸರದ ತುಂಬಾ ವ್ಯಾಪಿಸಿದ್ದ ಜಿ.ಪಿ. ರಾಜರತ್ನಂ ತುಂಬಾ ಸೆಳೆದರು. ಸೆಂಟ್ರಲ್ ಕಾಲೇಜಿನಲ್ಲಿ ರಾಜರತ್ನಂ ರೂಪಿಸಿ ಬೆಳೆಸಿದ ಕನ್ನಡ ಸಂಘ, ಕ್ರೈಸ್ಟ್ ಕಾಲೇಜಿನಲ್ಲಿ ಕನ್ನಡ ಸಂಘ ರೂಪಿಸುವಾಗ ಶ್ರೀನಿವಾಸರಾಜು ಅವರಿಗೆ ಮಾದರಿಯಾಯಿತು. ಎರಡನೆಯಾಗಿ, ಸೆಂಟ್ರಲ್ ಕಾಲೇಜಿನ ಲೈಬ್ರರಿ ಮುಂದಿನ ಕಲ್ಲುಬೆಂಚು ಅರ್ಥಾತ್ 'ಪಿಪಿ ಕಟ್ಟೆ' (ಪಿಪಿ ಅಂದರೆ ಪೋಲಿ ಪಟಾಲಂ ಅಂತಾರೆ ಮೇಷ್ಟ್ರು) ರಾಜು ಅವರ ವಿಚಾರಗಳನ್ನು ಗಟ್ಟಿಗೊಳಿಸಿತು. ಗೆಳೆಯರ ಪಟಾಲಂನ ಸಂಜೆಯ ಸಭೆ ನಡೆಯುತ್ತಿದ್ದುದು ಈ ಕಟ್ಟೆಯ ಮೇಲೆಯೇ. 'ಅಂಕಣ' ಪತ್ರಿಕೆ ಹುಟ್ಟಿದ್ದು ಪಿಪಿ ಕಟ್ಟೆ ಸಭೆಗಳಲ್ಲೇ.

ಕ್ರೈಸ್ಟ್ ಕಾಲೇಜು ಕನ್ನಡ ಸಂಘ ಶ್ರೀನಿವಾಸರಾಜು ಅವರ ಶ್ರಮ - ಕನಸಿನ ಅಭಿವ್ಯಕ್ತಿ. ಕನ್ನಡ ಸಂಘ ಹಾಗೂ ಶ್ರೀನಿವಾಸರಾಜು ಅವರನ್ನು ಪ್ರತ್ಯೇಕವಾಗಿ ನೆನೆಯುವುದು ಸಾಧ್ಯವೇ ಇಲ್ಲ. ಬಯಸಿದ್ದರೆ ಯಾವುದೋ ಒಂದು ವಿಶ್ವವಿದ್ಯಾಲಯದ ಪ್ರಮುಖ ಸ್ಥಾನವನ್ನು ಅಲಂಕರಿಸಬಹುದಿತ್ತಾದರೂ, ನಿವೃತ್ತಿ ಹೊಂದುವ ದಿನದವರೆಗೂ ಶ್ರೀನಿವಾಸರಾಜು ಕ್ರೈಸ್ಟ್ ಕಾಲೇಜಿನಲ್ಲೇ ಉಳಿದರು. ಬೆಂಗಳೂರಿನ ಪ್ರತಿಷ್ಠಿತ ಹಾಗೂ ಹೈಟೆಕ್ ಕಾಲೇಜುಗಳಲ್ಲೊಂದಾದ ಕ್ರೈಸ್ಟ್ ಕಾಲೇಜಿನ ಹೆಸರನ್ನು ಕನ್ನಡ ಸಂಘದ ಮೂಲಕ ನಾಡಿನುದ್ದಕ್ಕೂ ಮುಟ್ಟಿಸಿದ ಕೀರ್ತಿ ರಾಜು ಅವರಿಗೆ ಸಲ್ಲುತ್ತದೆ.

ಬೇರೆಯವರ ಪುಸ್ತಕ ಪ್ರಕಟಿಸುವುದರಲ್ಲಿ, ಆ ಪುಸ್ತಕಗಳನ್ನು ಸಹೃದಯರಿಗೆ ಮುಟ್ಟಿಸುವುದರಲ್ಲೇ ಸಾರ್ಥಕತೆ ಕಂಡ ಶ್ರೀನಿವಾಸರಾಜು ತಾವು ಬರೆದದ್ದು ಕಡಿಮೆ. ನಾಟಕ, ಕಥೆ, ಕವಿತೆ, ವಿಮರ್ಶೆ ಕ್ಷೇತ್ರಗಳಲ್ಲಿ ಆಗಾಗ ತೊಡಗಿಸಿಕೊಂಡ ಅವರಿಗೆ ಪೂರ್ಣ ಪ್ರಮಾಣದಲ್ಲಿ ಬರಹಗಾರರಾಗಲು ಬಿಡುವಾಗಲೇ ಇಲ್ಲ (ಕನ್ನಡ ಪರಿಚಾರಿಕೆಯಲ್ಲಿ ತೊಡಗಿದವರಿಗೆ ಬಿಡುವಾಗುವುದಾದರೂ ಹೇಗೆ). ಶ್ರೀನಿವಾಸರಾಜು ಅವರ ಮೂಲಕ ನಾಟಕಗಳನ್ನು ಕನ್ನಡ ಸಾಹಿತ್ಯದಲ್ಲಿ ವಿಭಿನ್ನ ಪ್ರಯೋಗಗಳು ಎಂದು ಗುರ್ತಿಸಲಾಗಿದೆ.

ಕನ್ನಡ ಸಂಘದ ಮೂಲಕ ೧೭೦ಕ್ಕೂ ಹೆಚ್ಚು ಪುಸ್ತಕಗಳ ಪ್ರಕಟಿಸಿದ ಶ್ರೀನಿವಾಸರಾಜು ಒತ್ತು ನೀಡಿದ್ದು ಯುವ ಬರಹಗಾರರಿಗೆ. ಅದರಲ್ಲೂ ಕವಿಗಳಿಗೆ. ಎಚ್.ಎಸ್. ಶಿವಪ್ರಕಾಶ್. ಎಸ್. ಮಂಜುನಾಥ್, ಪ್ರತಿಭಾ

ನಂದಕುಮಾರ್, ಅಬ್ದುಲ್ ರಷೀದ್, ಟಿ.ಎಸ್. ಸೀತಾರಾಂ, ಅಮರೇಶ ನುಗಡೋಣಿ, ಬಸವರಾಜ ಕಲ್ಗುಡಿ, ಎಚ್.ಎಸ್. ರಾಘವೇಂದ್ರ ರಾವ್, ಎನ್.ಕೆ. ಹನುಮಂತಯ್ಯ. ಇಲ್ಲಿ ಬಹುತೇಕರ ಮೊದಲ ಪುಸ್ತಕಗಳು ಪ್ರಕಟವಾದದ್ದು ಕನ್ನಡ ಸಂಘದ ಮೂಲಕವೇ. ಇದೆಲ್ಲ ಸಾಹಿತ್ಯ ಪರಿಚಾರಕ ಶ್ರೀನಿವಾಸರಾಜು ಅವರ ಮುಖ. ತುಂಬಾ ಜನಕ್ಕೆ ಗೊತ್ತಿಲ್ಲದ ಇನ್ನೊಂದು ಮುಖ ಅವರಿಗಿದೆ. ದಾರಿಯಲ್ಲಿ ಎನ್‌ಸಿಸಿ ಸಮವಸ್ತ್ರ ಧರಿಸಿದ ವಿದ್ಯಾರ್ಥಿಯೊಬ್ಬ ನಡೆದುಹೋಗುತ್ತಿದ್ದರೆ ಶ್ರೀನಿವಾಸರಾಜು ಅವರ ನಡಿಗೆ ನಿಧಾನವಾಗುತ್ತದೆ. ಅದೇ ರೀತಿ, ಫುಟ್ಬಾಲ್ ಆಡುವ ಹುಡುಗರನ್ನು ಕಂಡಾಗ ಅವರ ಕಣ್ಣುಗಳಲ್ಲಿ ಹೊಳಪು ಕಾಣಿಸುತ್ತದೆ. ವಿದ್ಯಾರ್ಥಿ ದಿನಗಳಲ್ಲಿ ಶ್ರೀನಿವಾಸರಾಜು ಅವರಿಗೆ ಎನ್‌ಸಿಸಿ ಎಂದರೆ ಅಚ್ಚುಮೆಚ್ಚು. ವಿದ್ಯಾರ್ಥಿಯಾಗಿದ್ದಾಗ ಎನ್‌ಸಿಸಿ ಕೆಡೆಟ್ ಆಗಿದ್ದ ಅವರು, ಅನಂತರ ಎನ್‌ಸಿಸಿ ಅಧಿಕಾರಿಯಾಗಿಯೂ ದುಡಿದಿದ್ದರು. ಎನ್‌ಸಿಸಿಯಷ್ಟೇ ಫುಟ್ಬಾಲ್ ಅವರಿಗಿಷ್ಟ. ಕಾಲ್ಚೆಂಡಿನಾಟದಲ್ಲಿ ಗೋಲು ರಕ್ಷಕರಾಗಿ ಚೆಂಡು ಹಿಡಿಯುವುದು ತುಂಬಾ ಖುಷಿ ಕೊಡುವ ಸಂಗತಿ. ಎನ್‌ಸಿಸಿ ಹಾಗೂ ಫುಟ್ಬಾಲ್ ಬಗೆಗೆ ರಾಜುಮೇಷ್ಟ್ರು ಈಗಲೂ ಭಾವುಕರಾಗಿ ಮಾತಾಡುತ್ತಾರೆ.

ಆರ್ಯಭಟ, ವಿಶ್ವೇಶ್ವರಯ್ಯ, ಸಂಸ ಮುಂತಾದ ಪ್ರಶಸ್ತಿಗಳು, ಕೋಲಾರ ಜಿಲ್ಲಾ ಏಳನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆಯ ಗೌರವ ಶ್ರೀನಿವಾಸರಾಜು ಅವರಿಗೆ ಸಂದಿವೆ. ಇನ್ನೇನು ಕ್ರೈಸ್ಟ್ ಕಾಲೇಜಿನ ಕರ್ತವ್ಯದಿಂದ ನಿವೃತ್ತರಾಗುತ್ತಾರೆ ಅನ್ನುವಾಗ ರಾಜು ಮೇಷ್ಟ್ರಿಗೆ, ಅವರ ಕನ್ನಡ ಸಂಘಕ್ಕೆ ಪುಸ್ತಕ ಪ್ರಾಧಿಕಾರದ ಉತ್ತಮ ಪ್ರಕಾಶಕ ಪ್ರಶಸ್ತಿ ದೊರೆತದ್ದು ಕನ್ನಡ ಸಂಘದೊಂದಿಗಿನ ಅವರ ಒಡನಾಟಕ್ಕೆ ಅರ್ಥಪೂರ್ಣ ವಿದಾಯವಾಗಿತ್ತು. ಆದರೆ, ಕನ್ನಡ ಪುಸ್ತಕ ಪ್ರಾಧಿಕಾರದ ಅಧ್ಯಕ್ಷ ಸ್ಥಾನಕ್ಕೆ ಸೂಚಿತವಾಗಿದ್ದ ಶ್ರೀನಿವಾಸರಾಜು ಅವರ ಹೆಸರು ರಾಜಕೀಯ ಲೆಕ್ಕಾಚಾರದಲ್ಲಿ ರಾತ್ರೋರಾತ್ರಿ ಇವರ ಕೈ ತಪ್ಪಿದ್ದು ಕಣ್ಣಮುಂದಿನ ಸತ್ಯ. ಕ್ರೈಸ್ಟ್ ಕಾಲೇಜಿನ ಕನ್ನಡ ಮೇಷ್ಟ್ರು ಕರ್ತವ್ಯದಿಂದ ನಿವೃತ್ತರಾಗಿ ವಿಶ್ರಾಂತ ಜೀವನ ಸಾಗಿಸುತ್ತಿದ್ದರೂ ಇವರ ಕನ್ನಡ ಪರಿಚಾರಿಕೆಗೆ ಮಾತ್ರ ವಿಶ್ರಾಂತಿ ಎಂಬುದಿಲ್ಲ. ಕನ್ನಡದ ಕೆಲಸ ಎಂದರೆ ಅವರಿಗೆ ಆಹ್ವಾನವೇ ಬೇಕಿಲ್ಲ.

'ಮೇಷ್ಟ್ರೇ, ಬೇರೆಯವರಿಂದ ಬರೆಸುವುದನ್ನು ಕಡಿಮೆ ಮಾಡಿ, ಇನ್ನು ಮುಂದಾದರೂ ನಿಮ್ಮ ಬರವಣಿಗೆಗೆ ಗಮನ ಕೊಡಿ' ಎಂದರೆ ನಗುತ್ತಾರೆ. ಇನ್ನೂ ಏನೇನು ಕೆಲಸ ಬಾಕಿಯಿದೆ ಎಂದು ಪಟ್ಟಿ ನೀಡುತ್ತಾರೆ. ಕನ್ನಡದ ಬಗ್ಗೆ, ಕನ್ನಡದಂಥ ಪ್ರಾದೇಶಿಕ ಭಾಷೆಗಳ ಸ್ಥಿತಿಗತಿ ಬಗ್ಗೆ, ಜಾಗತೀಕರಣದ ಬಗ್ಗೆ ರಾಜು ಮೇಷ್ಟ್ರು ಅರ್ಥಪೂರ್ಣವಾಗಿ ಮಾತಾಡುತ್ತಾರೆ. ರಾಜು ಮೇಷ್ಟ್ರ ಜೀವನ ಪ್ರೇಮ ಹಾಗೂ ಪುಸ್ತಕ ಪ್ರೇಮ ಬೆಂಗಳೂರಿನ ಮಾಲಿನ್ಯದ ಮಸಿಗೂ ಮಾಸದಷ್ಟು ತಾಜಾ ಆಗಿವೆ. ರಾಜು ಮೇಷ್ಟ್ರನ್ನು ಹಳ್ಳಿಯ ಅಜ್ಜನೊಂದಿಗೆ ನೆನೆದದ್ದು ಆ ಕಾರಣದಿಂದಲೇ. ಮೊಮ್ಮಗುವಿಗೆ ಪೆಪ್ಪರುಮೆಂಟು ಕೊಟ್ಟು, ಕಂದನ ನಗೆಯನ್ನು ತನ್ನ ಕಣ್ಣಲ್ಲಿ ತುಂಬಿಕೊಳ್ಳುವ ಅಜ್ಜನಿಗೂ ರಾಜು ಮೇಷ್ಟ್ರಿಗೂ ಹೆಚ್ಚಿನ ವ್ಯತ್ಯಾಸಗಳಿಲ್ಲ. ಮೊಗೆದಷ್ಟು ಉಕ್ಕುವ ಜೀವನಪ್ರೇಮ ಇಬ್ಬರಲ್ಲೂ ಇದೆ.

ರಾಜು ಮೇಷ್ಟ್ರ ಸಾಧನೆ ಏನು? ಬದುಕಿನ ಇತರ ತುರ್ತುಗಳಷ್ಟೇ ಸಾಹಿತ್ಯಿಕ ಸಾಂಸ್ಕೃತಿಕ ಕಾಳಜಿಗಳನ್ನೂ ಅಂಟಿಸಿಕೊಂಡು ತಿರುಗುವ ಸಂಚಯದ ಪ್ರಹ್ಲಾದ್ ಹಾಗೂ ಮಿತ್ರರು - 'ನಮಗೆಲ್ಲ ರಾಜು ಮೇಷ್ಟ್ರೆ ಸ್ಫೂರ್ತಿ' ಎನ್ನುವುದೇ ಈ ಪ್ರಶ್ನೆಗೆ ಉತ್ತರ, ಈ ಮಾತು 'ರಾಜು ಮೇಷ್ಟ್ರ ಹಾದಿಯಲ್ಲಿ ಮುಂದೇನು?' ಎನ್ನುವ ಇನ್ನೊಂದು ಪ್ರಶ್ನೆಗೂ ಉತ್ತರದಂತಿರುವುದು ಜಡಗಟ್ಟಿದ ಸಾಂಸ್ಕೃತಿಕ ಸಂದರ್ಭದಲ್ಲಿ ಭರವಸೆ ಹುಟ್ಟಿಸುತ್ತದೆ.

---

[ಈ ಬರಹ ಅಚ್ಚಿಗೆ ಹೋಗುವ ಸಂದರ್ಭದಲ್ಲಿ ರಾಜು ಮೇಷ್ಟ್ರನ್ನು ಕರ್ನಾಟಕ ಸರ್ಕಾರ ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಸದಸ್ಯರನ್ನಾಗಿ ನೇಮಕ ಮಾಡಿದೆ. ಅದಕ್ಕಾಗಿ ಅವರಿಗೆ ಅಭಿನಂದನೆಗಳು - *ಸಂಪಾದಕ*]

ಸಾಹಿತ್ಯ ಸಂಸ್ಕೃತಿ ಕಲೆ

# ಪುಸ್ತಕ ಸ್ವೀಕಾರ



**Violence in Hinduism is a frontal attack on Adishankara - The Week**

**✪ ಶಂಕರಾಚಾರ್ಯ ಮತ್ತು ಪ್ರತಿಗಾಮಿತನ:**

(ಹನ್ನೊಂದನೆಯ ಮುದ್ರಣ) ಲೇ: *ಭಗವಾನ್,*
ಪುಟ ೧೬೦, ಬೆಲೆ ರೂ.೬೦/- ಪ್ರ: ಮಹಿಮ ಪ್ರಕಾಶನ, ನಂ. ೧೦, ಹುಡ್ಕೊ ಮನೆ, ೧ನೇ ಹಂತ, ಕುವೆಂಪುನಗರ, ಮೈಸೂರು - ೫೭೦ ೦೨೩. ದೂರವಾಣಿ: ೦೮೨೧ - ೫೬೦ ೪೧೦.

**✪ ಹತ್ತೊಂಬತ್ತನೇ ಶತಮಾನದ ಹರಿದಾಸ ಸಾಹಿತ್ಯ:** ಲೇ: *ಡಾ. ಅನಂತ ಪದ್ಮನಾಭರಾವ್,* ಪುಟ ೨೫೬, ಬೆಲೆ ರೂ. ೨೦೦/-

**✪ ಎತ್ತಪ್ಪ:** (ಕಾಡುಗೊಲ್ಲ ಬುಡಕಟ್ಟಿನ ಸಾಂಸ್ಕೃತಿಕ ವೀರನ ಕತೆ) ಲೇ: *ಡಾ. ಮೀರಾಸಾಬಿಹಳ್ಳಿ ಶಿವಣ್ಣ,* ಪುಟ ೮೮, ಬೆಲೆ ರೂ. ೮೦/-

**✪ ಉರಿಯ ಉಯ್ಯಲೆ:** (ವಿಮರ್ಶಾ ಸಂಕಲನ) ಲೇ: *ಪ್ರೊ. ಶಿವರಾಮಯ್ಯ,* ಪುಟ ೧೭೨, ಬೆಲೆ ರೂ. ೧೫೦/-

**ಈ ಮೂರೂ ಪುಸ್ತಕಗಳ ಪ್ರಕಾಶಕರು:**
ಸಿ.ವಿ.ಜಿ. ಪಬ್ಲಿಕೇಷನ್ಸ್, ೨ನೇ ಮುಖ್ಯರಸ್ತೆ, ವಯ್ಯಾಲಿಕಾವಲ್, ಬೆಂಗಳೂರು - ೫೬೦ ೦೦೩.

**✪ ಮಠಾಧೀಶರ ಮರ್ಮ:** ಲೇ: *ವೀರಭದ್ರ ಚನ್ನಮಲ್ಲ ಸ್ವಾಮೀಜಿ,* ಪುಟ ೯೧, ಬೆಲೆ ರೂ. ೬೫/-

**✪ ಪಂಚಾಚಾರ್ಯರ ಪೂರ್ವಗ್ರಹಗಳು:** ಲೇ: *ವೀರಭದ್ರ ಚನ್ನಮಲ್ಲ ಸ್ವಾಮೀಜಿ,* ಪುಟ ೭೩, ಬೆಲೆ ರೂ. ೫೦/-

**ಈ ಎರಡೂ ಪುಸ್ತಕಗಳ ಪ್ರಕಾಶಕರು:**
ಅನು ಪ್ರಕಾಶನ, ೮ನೇ ಬಿ ಮೇನ್, ೩ನೇ ಸ್ಟೇಜ್ ಬಸವೇಶ್ವರನಗರ, ಬೆಂಗಳೂರು - ೫೬೦ ೦೭೯.




**✪ ಅಸ್ಪೃಶ್ಯರು:** (ಒಂದು ಪರಿಶೀಲನೆ) ಲೇ: *ಎಂ. ವೆಂಕಟಸ್ವಾಮಿ,* ಪುಟ ೧೬೦, ಬೆಲೆ ರೂ. ೧೬೦/- ಪ್ರ: ನವಕರ್ನಾಟಕ ಪ್ರಕಾಶನ, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧.

**✪ ವಚನವಾಹಿನಿ:** ಲೇ: *ಡಾ. ವಿಜಯಶ್ರೀ ಸಬರದ,* ಪುಟ ೧೪೬, ಬೆಲೆ ರೂ. ೭೦/- ಪ್ರ: ಪಲ್ಲವಿ ಪ್ರಕಾಶನ, ಸರಸ್ವತಿಪುರ, ವಿಶ್ವವಿದ್ಯಾಲಯ ಅಂಚೆ, ಗುಲಬರ್ಗಾ - ೫೮೫ ೧೦೬.



✪ **ಜಂಗಮದೆಡೆಗೆ:** (ನಾಟಕ) ಲೇ: *ಶ್ರೀ ಪಂಡಿತಾರಾಧ್ಯ ಶಿವಾಚಾರ್ಯ ಸ್ವಾಮೀಜಿ,* ಪುಟ ೧೨೪, ಬೆಲೆ ರೂ. ೭೫/-

✪ **ಜನಸಂಸ್ಕೃತಿ:** ಸಂ: *ಶ್ರೀ ಪಂಡಿತಾರಾಧ್ಯ ಶಿವಾಚಾರ್ಯ ಸ್ವಾಮಿಗಳು,* ಪುಟ ೧೦೬, ಬೆಲೆ ರೂ. ೬೦/-

**ಈ ಎರಡೂ ಪುಸ್ತಕಗಳ ಪ್ರಕಾಶಕರು:**
ಶ್ರೀ ಶಿವಕುಮಾರ ಕಲಾ ಸಂಘ (ರಿ), ಸಾಣೇಹಳ್ಳಿ - ೫೭೭ ೫೧೫,
ಹೊಸದುರ್ಗ - ತಾಲ್ಲೂಕು, ಚಿತ್ರದುರ್ಗ - ಜಿಲ್ಲೆ.




## ದಳವಾಯಿ ಡಜನ್ ಕೃತಿಗಳು

✪ **ಅಂತರಗಟ್ಟೆವ್ವ :** (ಕಾವ್ಯ ರೂಪಕ) ಪುಟ ೮೨, ಬೆಲೆ ರೂ. ೬೦/-
✪ **ರಕ್ತದ ಬಣ್ಣ ಕಪ್ಪು :** (ಕವನ ಸಂಕಲನ) ಪುಟ ೧೧೮, ಬೆಲೆ ರೂ. ೧೦೦/-
✪ **ಚಲನ :** (ಸಣ್ಣ ಕತೆಗಳು) ಪುಟ ೮೨, ಬೆಲೆ ರೂ. ೬೦/-
✪ **ಡೋಲಿ ಮತ್ತಿತರ ನಾಟಕಗಳು :** (ಏಕಾಂಕಗಳು) ಪುಟ ೧೪೨, ಬೆಲೆ ರೂ. ೧೨೫/- ✪ **ತಿಳಿವಳಿಕೆ :** (ವೈಚಾರಿಕ ಲೇಖನಗಳು) ಪುಟ ೧೦೦, ಬೆಲೆ ರೂ. ೭೫/- ✪ **ಓದು ಬರಹ :** (ವಿಮರ್ಶಾ ಲೇಖನಗಳು) ಪುಟ ೧೮೨, ಬೆಲೆ ರೂ. ೧೫೦/- ✪ **ಸಿನಿಮಾ ಮೀಮಾಂಸೆ :** (ಲೇಖನಗಳು) ಪುಟ ೭೨, ಬೆಲೆ ರೂ. ೫೦/- ✪ **ಕೃತಿ-ಆಕೃತಿ :** (ಲೇಖನಗಳು) ಪುಟ ೧೨೬, ಬೆಲೆ ರೂ. ೧೦೦/- ✪ **ಉಳುಮೆ :** (ಲೇಖನಗಳು) ಪುಟ ೮೦, ಬೆಲೆ ರೂ. ೬೦/- ✪ **ಸಂಸ್ಕೃತಿ ನಿರ್ವಚನ :** (ಲೇಖನಗಳು) ಪುಟ ೮೦, ಬೆಲೆ ರೂ. ೬೦/- ✪ **ಬೆಳೆ :** (ಲೇಖನಗಳು) ಪುಟ ೬೫, ಬೆಲೆ ರೂ. ೭೫/- ✪ **ಸುಯೋಧನ :** (ನಾಟಕ) ಪುಟ ೧೦೦, ಬೆಲೆ ರೂ. ೭೫/-

*ಈ ಹನ್ನೆರಡೂ ಪುಸ್ತಕಗಳ ಲೇಖಕರು :* ರಾಜಪ್ಪ ದಳವಾಯಿ.
*ಪ್ರಕಾಶಕರು :* ಶುಭ ಮುದ್ರಣ ಪ್ರಕಾಶನ, ನಂ. ೨೦೦೭, ಕುಮಾರಸ್ವಾಮಿ ಲೇಔಟ್, ಬೆಂಗಳೂರು.




✪ **ಶ್ರೀ ಕುವೆಂಪು ಸಂದರ್ಶನ ಮತ್ತು ಪ್ರಸಂಗಗಳು:** ಸಂದರ್ಶಕ, ಸಂಪಾದಕರು: *ಕೋ. ಚೆನ್ನಬಸಪ್ಪ,* ಪುಟ ೧೭೫, ಬೆಲೆ ರೂ. ೭೫/-

✪ **ಸೂರ್ಯನ ನೆರಳು:** ಲೇಖಕಿ: *ಲತಾ ರಾಜಶೇಖರ್,* ಪುಟ ೩೧೮, ಬೆಲೆ ರೂ. ೮೦/-

**ಈ ಎರಡೂ ಪುಸ್ತಕಗಳ ಪ್ರಕಾಶಕರು:**
ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ, ಗೋಕುಲಂ
೩ನೇ ಹಂತ, ಮೈಸೂರು - ೫೭೦ ೦೦೨.

## ಈ ಸಂಚಿಕೆಯ ಲೇಖಕರು/ವಿಳಾಸ


❖ ಪ್ರೊ. ಎಸ್.ಜಿ. ಸಿದ್ಧರಾಮಯ್ಯ, *ಹೊಂಬೆಳಕು*, ನಳಂದ ಶಾಲೆ ಪಕ್ಕ, ಶೆಟ್ಟಿಹಳ್ಳಿ ಗೇಟ್ ಹತ್ತಿರ, ತುಮಕೂರು - ೫೭೨ ೧೦೨.

❖ ಡಾ. ಎಚ್.ಎಲ್. ಪುಷ್ಪ, ಕನ್ನಡ ಉಪನ್ಯಾಸಕಿ, ಸರ್ಕಾರಿ ಕಿರಿಯ ಕಾಲೇಜು, ಮುನಿರೆಡ್ಡಿ ಪಾಳ್ಯ, ಜೆ.ಸಿ. ನಗರ, ಬೆಂಗಳೂರು - ೫೬೦ ೦೩೨.

❖ ಡಾ. ಆರ್.ವಿ. ಭಂಡಾರಿ, ಕೆರೆಕೋಣ, ಅರೆ ಅಂಗಡಿ ಅಂಚೆ, ಹೊನ್ನಾವರ ತಾ. ಉ.ಕ.

❖ ಜ.ನಾ. ತೇಜಶ್ರೀ, ನಂ. ೪೫೦, *ಶ್ರೇಯಸ್*, ವಿಶ್ವೇಶ್ವರಯ್ಯ ರಸ್ತೆ, ವಿದ್ಯಾನಗರ, ಹಾಸನ - ೫೭೩೨೦೧.

❖ ಕಮಲಾ ಮೂರ್ತಿ, ನಂ. ೨೮೧/೧೨, *ಮೌನರಾಗ*, ಆದರ್ಶನಗರ, ಅರಿಶಿನಕುಂಟೆ ಅಂಚೆ, ನೆಲಮಂಗಲ ತಾ. - ೫೬೨ ೧೨೩.

❖ ರಾಮಲಿಂಗಪ್ಪ ಟಿ. ಬೇಗೂರು, ಕನ್ನಡ ಉಪನ್ಯಾಸಕರು, ಸರ್ಕಾರಿ ಬಾಲಕರ ಪ್ರಥಮ ದರ್ಜೆ ಕಾಲೇಜು, ಕೋಲಾರ - ೫೬೩ ೧೦೧.

❖ ರಘುನಾಥ ಚ.ಹ., *ಶ್ರೀರಂಗ ನಿಲಯ*, ಬೋವಿ ಕಾಲೋನಿ, ನಾಗಶೆಟ್ಟಿಹಳ್ಳಿ, ಬೆಂಗಳೂರು - ೫೬೦ ೦೯೪.

❖ ಪದ್ಮ ಟಿ., ನಂ. ೭೫೫, ೭ನೇ ಮುಖ್ಯರಸ್ತೆ, ವಿಜಯನಗರ, ಬೆಂಗಳೂರು - ೫೬೦ ೦೪೦.

❖ ಪ್ರೊ. ಓ.ಎಲ್. ನಾಗಭೂಷಣಸ್ವಾಮಿ, *ಇಂಗ್ಲೀಷ್ ಉಪನ್ಯಾಸಕರು, ಮಹಾರಾಣಿ ಕಲಾ ಕಾಲೇಜು*, ಶೇಷಾದ್ರಿರಸ್ತೆ, ಬೆಂಗಳೂರು - ೫೬೦ ೦೦೯.

❖ ಪ್ರೊ. ಜಿ.ಕೆ. ಗೋವಿಂದರಾವ್, '*ಗುರುಕೃಪ*', ೧೬೧, ೩೬ನೇ ಎ ಕ್ರಾಸ್, ೭ನೇ ಬ್ಲಾಕ್ ಜಯನಗರ, ಬೆಂಗಳೂರು - ೫೬೦ ೦೮೨.

❖ ಅಬ್ದುಲ್ ರೆಹಮಾನ್, ಡೋಮಗೇರಾ, ಕೆಸರೊಳ್ಳಿ - ಅಂಚೆ, ಹಳಿಯಾಳ ತಾ., ಉ.ಕ.

❖ ಶ್ರೀಮತಿ ಗಂಗಾಸ್ವಾಮಿ, 'ಪ್ರಕೃತಿ', ೫೦೪, ಸೆಕ್ಟರ್ - ೩, ಶಿವಬಸವನಗರ, ಬೆಳಗಾಂ - ೧೦.

❖ ಹಾಲ್ಕುರಿಕೆ ಶಿವಶಂಕರ್, C/o ಸಂವಾದ, *ಸ್ಫೂರ್ತಿಧಾಮ*, ವಿಶ್ವನೀಡಂ ಅಂಚೆ, ಮಾಗಡಿ ಮುಖ್ಯರಸ್ತೆ, ಬೆಂಗಳೂರು - ೫೬೦ ೦೯೧.

❖ ವಾಸುದೇವ ನಾಡಿಗ್, C/o ಸಂಚಯ ಪ್ರಕಾಶನ, ಬೆಂಗಳೂರು - ೫೬೦ ೦೨೯.


## ಮುಂದಿನ ಸಂಚಿಕೆಯಲ್ಲಿ...

ANVESHANE MAG(5) PBR.DECL 127/85-86

# ಅನ್ವೇಷಣೆ

ಅನ್ವೇಷಣೆ - ಸಾಹಿತ್ಯ ಸಂಸ್ಕೃತಿ ಕಲೆಗೆ ಮೀಸಲು.



* ನೀವು ಚಂದಾದಾರರೇ ?
* ಈಗಾಗ್ಲೆ ಪತ್ರಿಕೆ ಓದುತ್ತೀರಾ?
* ಚಂದಾ ಕೊಡದಿದ್ದರೆ ಕೇವಲ ರೂ. ೧೦೦/- ಕೊಡಲು ಸಾಧ್ಯವೇ?

ವಾರ್ಷಿಕ ಚಂದಾ ರೂ. ೧೦೦/- ವ್ಯಕ್ತಿಗಳಿಗೆ ; ರೂ.೧೨೫/- ಸಂಸ್ಥೆ/ಗ್ರಂಥಾಯಗಳಿಗೆ

---

☆ *ಒಂದು ಸಾಂಸ್ಕೃತಿಕ ಸಂದರ್ಭದಲ್ಲಿ ಯಾವುದೇ ವಿವಾದಕ್ಕೂ ಅನ್ವೇಷಣೆ ಪ್ರತಿಕ್ರಿಯಿಸಿ ತನ್ನ ಜವಾಬ್ದಾರಿಯನ್ನು ಚನ್ನಾಗಿ ನಿರ್ವಹಿಸುತ್ತಿದೆ. - ಪ್ರೊ|| ಕೆ.ಎಸ್. ಭಗವಾನ್*

☆ 'ಅನ್ವೇಷಣೆ' ಸಾಹಿತ್ಯ - ಸಾಂಸ್ಕೃತಿಕ ಚಟುವಟಿಕೆಗಳಿಗೆ ಮೀಸಲಾದ ಪತ್ರಿಕೆ

☆ ಪ್ರಗತಿಪರ ವಿಚಾರಗಳಿಗೆ ಹಾಗೂ ಹಿರಿ-ಕಿರಿ ಬರಹಗಾರರ ತಾತ್ವಿಕ ವಿಚಾರಗಳ ಸಂವಾದಕ್ಕೆ



ಅನ್ವೇಷಣೆ

☞ ಚಂದಾದಾರರಾಗಿ ; ಸಾಹಿತ್ಯಾಸಕ್ತರನ್ನೂ ಚಂದಾದಾರರಾಗಿಸಿ - ಪತ್ರಿಕೆ ಉಳಿಸಿ. ☜

**ANVESHANE** Edited - Printed - Published & Owned by **R.G. Halli Nagaraj**,
37/2 A 'Nisarga', Nagarabhavi Road, Vijayanagar, BANGALORE - 560 040. ✆ : 340 4244